## ನೋಂದಣಿ ಮತ್ತು ಮುದ್ರಾಂಕಗಳ ಇಲಾಖೆ

## ನೇಮಕಾತಿ ಆದೇಶ

## ಜಿಲ್ಲಾ ನೋಂದಣಾಧಿಕಾರಿಗಳು, ಉಡುಪಿ ಇವರ ನಡವಳಿಗಳು

**ವಿಷಯ :** ನೋಂದಣಿ ಮತ್ತು ಮುದ್ರಾಂಕ ಇಲಾಖೆಯ ಉಡುಪಿ ಜಿಲ್ಲೆಯಲ್ಲಿ ದ್ವಿತೀಯ ದರ್ಜೆ ಸಹಾಯಕರ ವೃಂದದಲ್ಲಿ ಗುರುತಿಸಲ್ಪಟ್ಟ ಬ್ಯಾಕ್‌ಲಾಗ್ ಹುದ್ದೆಗಳಲ್ಲಿ ದ್ವಿತೀಯ ದರ್ಜೆ ಸಹಾಯಕರನ್ನು ನೇಮಕ ಮಾಡಿಕೊಳ್ಳುವ ಬಗ್ಗೆ.

**ಉಲ್ಲೇಖ :**

1. ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು, ಬೆಂಗಳೂರು ಇವರಿಗೆ ಈ ಕಛೇರಿಯಿಂದ ಬರೆದಿರುವ ಪತ್ರ ಸಂಖ್ಯೆ: ಇಎಸ್‌ಟಿ:97:2001-02 ದಿನಾಂಕ: 17.01.2002.
2. ಸರ್ಕಾರದ ಅಧಿಸೂಚನೆ ಸಂಖ್ಯೆ: ಡಿಪಿಎಆರ್ 13 ಎಸ್‌ಬಿಸಿ 2001 ದಿನಾಂಕ: 21.11.2001 ರನ್ವಯ ಪ್ರಕಟಿಸಿರುವ ಕೆ.ಸಿ.ಎಸ್. (ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದವರಿಗೆ ಮೀಸಲಿಟ್ಟು ತುಂಬದೇ ಇರುವ ಹುದ್ದೆಗಳ) ವಿಶೇಷ ನೇಮಕಾತಿ ನಿಯಮಗಳು 2001.
3. ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು, ಬೆಂಗಳೂರು ಇವರ ಅಧಿಸೂಚನೆ ಸಂಖ್ಯೆ: EST-1-273/ 2001-02 ದಿನಾಂಕ: 1.08.2002 (ದಿನಾಂಕ: 8.8.2002 ರ ರಾಜ್ಯಪತ್ರದಲ್ಲಿ ಪ್ರಕಟವಾಗಿದೆ).
4. ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು, ಬೆಂಗಳೂರು ಇವರ ಅಂತಿಮ ಆಯ್ಕೆ ಪಟ್ಟಿ ಸಂಖ್ಯೆ EST-1-273/ 2001-02 ದಿನಾಂಕ: 23.11.2004
5. ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು, ಬೆಂಗಳೂರು ಇವರ ಅಲಾಟ್‌ಮೆಂಟ್ ಆದೇಶ ಸಂಖ್ಯೆ: EST-1-273/ 2001-02 ದಿನಾಂಕ: 14.12.2004.

**ಪ್ರಸ್ತಾವನೆ:**

ಈ ಇಲಾಖೆಯ ಉಡುಪಿ ಜಿಲ್ಲೆಯಲ್ಲಿ ದ್ವಿತೀಯ ದರ್ಜೆ ಸಹಾಯಕರ ವೃಂದದಲ್ಲಿ ಕೆಳಕಂಡಂತೆ ಬ್ಯಾಕ್‌ಲಾಗ್ ಹುದ್ದೆಗಳು ಇರುತ್ತವೆಂದು ಈ ಕಛೇರಿಯಿಂದ ಉಲ್ಲೇಖ (1) ರನ್ವಯ ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು, ಬೆಂಗಳೂರು ಇವರಿಗೆ ವರದಿ ಮಾಡಲಾಗಿತ್ತು.

| ಕ್ರ.ಸಂ. | ಜಿಲ್ಲೆ | ಸದರಿ ಜಿಲ್ಲೆಯಲ್ಲಿ ಗುರುತಿಸಲ್ಪಟ್ಟ ಬ್ಯಾಕ್‌ಲಾಗ್ ಹುದ್ದೆಗಳ ಸಂಖ್ಯೆ | | |
|---|---|---|---|---|
| | | ಪರಿಶಿಷ್ಟ ಜಾತಿ | ಪರಿಶಿಷ್ಟ ಪಂಗಡ | ಒಟ್ಟು |
| 1. | ಉಡುಪಿ ಜಿಲ್ಲೆ | ಎರಡು | ಒಂದು | ಮೂರು |

ಈ ಬ್ಯಾಕ್‌ಲಾಗ್ ಹುದ್ದೆಗಳು ನೇರ ನೇಮಕಾತಿ ಮೂಲಕ ಭರ್ತಿ ಮಾಡುವ ಸಲುವಾಗಿ ಉಲ್ಲೇಖ (2)ರ ಬ್ಯಾಕ್‌ಲಾಗ್ ನಿಯಮಗಳ ಪ್ರಕಾರ ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು, ಬೆಂಗಳೂರು ಇವರು ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಅಭ್ಯರ್ಥಿಗಳಿಂದ ಉಲ್ಲೇಖ (3)ರ ಅಧಿಸೂಚನೆ ಮೂಲಕ ಅರ್ಜಿಗಳನ್ನು ಆಹ್ವಾನಿಸಿ, ಈ ಬಗ್ಗೆ ಸ್ವೀಕೃತವಾದ ಎಲ್ಲಾ ಅರ್ಜಿಗಳು ಪರಿಶೀಲನೆಗೊಂಡ ನಂತರ ಉಲ್ಲೇಖ (2)ರ ಬ್ಯಾಕ್‌ಲಾಗ್ ನಿಯಮಗಳ ಪ್ರಕಾರ 29 ರಿಂದ 40 ವರ್ಷ ವಯೋಮಿತಿಯಲ್ಲಿರುವ ಅರ್ಹ ಅಭ್ಯರ್ಥಿಗಳನ್ನು ಮೆರಿಟ್ ಆಧಾರದ ಮೇಲೆ ಆಯ್ಕೆ ಮಾಡಿ ಅರ್ಹ ಅಭ್ಯರ್ಥಿಗಳ ಅಂತಿಮ ಆಯ್ಕೆ ಪಟ್ಟಿಯನ್ನು ನಿಯಮಾನುಸಾರ ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು, ಬೆಂಗಳೂರು ಇವರು ಉಲ್ಲೇಖ (4) ರನ್ವಯ ದಿನಾಂಕ: 23.11.2004 ರಂದು ಪ್ರಕಟಿಸಿ, ತದನಂತರ ಈ ಕಛೇರಿಯಿಂದ ಉಲ್ಲೇಖ (1)ರ ಪತ್ರದಲ್ಲಿ ಮೇಲ್ಕಂಡಂತೆ ವರದಿ ಮಾಡಿದ ಬ್ಯಾಕ್‌ಲಾಗ್ ಹುದ್ದೆಗಳಿಗೆ ಅನುಗುಣವಾಗಿ ಕೆಳಕಂಡ ಅಭ್ಯರ್ಥಿಗಳನ್ನು ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರವರು ಉಲ್ಲೇಖ (5)ರ ಅವರ ಅಲಾಟ್‌ಮೆಂಟ್ ಆದೇಶದಲ್ಲಿ ಈ ಜಿಲ್ಲೆಗೆ ಅಲಾಟ್ ಮಾಡಿ ಸದರಿ ಅಭ್ಯರ್ಥಿಗಳನ್ನು ಈ ಜಿಲ್ಲೆಯಲ್ಲಿ ದ್ವಿತೀಯ ದರ್ಜೆ ಸಹಾಯಕರೆಂದು ನೇಮಕ ಮಾಡಿಕೊಳ್ಳುವಂತೆ ನಿರ್ದೇಶಿಸಿದ್ದರ ಮೇರೆ ಕೆಳಕಂಡ ಅಭ್ಯರ್ಥಿಗಳನ್ನು ಸದರಿ ಬ್ಯಾಕ್‌ಲಾಗ್ ಹುದ್ದೆಗಳಲ್ಲಿ ನೇಮಕ ಮಾಡಿಕೊಳ್ಳುವ ಸಲುವಾಗಿ ಕೆಳಕಂಡ ಆದೇಶ ಹೊರಡಿಸಲಾಗಿದೆ.

## ಆದೇಶ

## ಸಂಖ್ಯೆ: ಸಿಬ್ಬಂದಿ:48:2004-05 ದಿನಾಂಕ: 30ನೇ ಡಿಸೆಂಬರ್ 2004

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಹಾಗೂ ಉಲ್ಲೇಖ (2)ರ ಬ್ಯಾಕ್‌ಲಾಗ್ ನಿಯಮಗಳನ್ವಯ ಪ್ರದತ್ತವಾದ ಅಧಿಕಾರದ ಮೇರೆಗೆ, ಉಲ್ಲೇಖ (5) ರಲ್ಲಿನ ಅಲಾಟ್‌ಮೆಂಟ್ ಆದೇಶದಲ್ಲಿ ಕಂಡು ಬಂದ ಕೆಳಕಂಡ ಅಭ್ಯರ್ಥಿಗಳನ್ನು ಈ ತಕ್ಷಣದಿಂದ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆಗೆ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ರೂ. 3000-75-3450-100-4450-125-5450 ರ ವೇತನ ಶ್ರೇಣಿಯಲ್ಲಿ ಇತರೆ ಭತ್ಯೆಗಳು ಸೇರಿದಂತೆ ತಾತ್ಕಾಲಿಕವಾಗಿ ದ್ವಿತೀಯ ದರ್ಜೆ ಸಹಾಯಕರೆಂದು ನೇಮಕ ಮಾಡಲಾಗಿದೆ ಹಾಗೂ ಸದರಿ ಅಭ್ಯರ್ಥಿಗಳನ್ನು ಅವರ ಹೆಸರಿನ ಮುಂದೆ ಸೂಚಿಸಿರುವ ಕಛೇರಿಗೆ ದ್ವಿತೀಯ ದರ್ಜೆ ಸಹಾಯಕರೆಂದು ಸ್ಥಳ ನಿಯುಕ್ತಿಗೊಳಿಸಿದೆ.

| ಕ್ರ. ಸಂ. | ಅಭ್ಯರ್ಥಿಯ ಹೆಸರು ಮತ್ತು ವಿಳಾಸ | ಎಸ್‌ಸಿ: ಎಸ್‌ಟಿ | ಜನ್ಮದಿನಾಂಕ | 7.9.2002ರ ದಿನಾಂಕಕ್ಕೆ ಅಭ್ಯರ್ಥಿಯ ವಯಸ್ಸು ವ-ತಿಂ-ದಿ | ವಿದ್ಯಾರ್ಹತೆ ಮತ್ತು ಶೇಕಡಾವಾರು ಅಂಕಗಳು | ಅಭ್ಯರ್ಥಿಯನ್ನು ದ್ವಿತೀಯ ದರ್ಜೆ ಸಹಾಯಕರೆಂದು ನೇಮಕ ಮಾಡಿ ಸ್ಥಳ ನಿಯುಕ್ತಿಗೊಳಿಸಿದ ಕಛೇರಿ ಹೆಸರು | ಯಾವ ಮೀಸಲಾತಿ ಅಡಿಯಲ್ಲಿ ಮತ್ತು ಯಾವ ವರ್ಗೀಕರಣದ ಅಡಿಯಲ್ಲಿ ನೇಮಕ ಮಾಡಲಾಗಿದೆಯೋ ಅದರ ವಿವರ |
|---|---|---|---|---|---|---|---|
| 1 | 2 | 3 | 4 | 5 | 6 | 7 | 8 |

| 1 | 2 | 3 | 4 | 5 | 6 | 7 | 8 |
|---|---|---|---|---|---|---|---|
| 1. | ನಾಗರಾಜ ಬಿ. ಓಲೇಕಾರ S/o ಭೀಮಪ್ಪ ಓಲೇಕಾರ ಸಾ: ಪೋಸ್ಟ್ ಹೊಸಕಟ್ಟೆ, ತಾ: ಹಿರೇಕೆರೂರ, ಜಿ: ಹಾವೇರಿ-581210 | ಎಸ್‌ಟಿ | 20.10.1972 | 29.10.17 | S.S.L.C. 73.667 | ಉಪನೋಂದಣಿ ಕಛೇರಿ ಬ್ರಹ್ಮಾವರ ಉಡುಪಿ ಜಿಲ್ಲೆ | ಪರಿಶಿಷ್ಟ ಪಂಗಡ ಸಾಮಾನ್ಯ ಅಭ್ಯರ್ಥಿ ಮುಖ್ಯಪಟ್ಟಿ. |
| 2. | ಪುಂಡಲೀಕ ಮಾರುತಿ ಕೆಂಪರಾಯಗೋಳ S/o ಸಿದ್ಧಲಿಂಗವ್ವ, ಮು/ಪೋ ಗುಡಸ, ತಾ: ಹುಕ್ಕೇರಿ, ಜಿ: ಬೆಳಗಾವಿ-591306. | ಎಸ್‌ಸಿ | 01.08.1973 | 29.01.06 | S.S.L.C. 72.500 | ಉಪನೋಂದಣಿ ಕಛೇರಿ ಉಡುಪಿ ಉಡುಪಿ ಜಿಲ್ಲೆ | ಪರಿಶಿಷ್ಟ ಜಾತಿ ಗ್ರಾಮೀಣ ಅಭ್ಯರ್ಥಿ ಮುಖ್ಯಪಟ್ಟಿ. |
| 3. | ಲಕ್ಷ್ಮಣ ಭೀಮಣ್ಣ ಕಟ್ಟಿಮನಿ S/o ಮುಕ್ತಾಬಾಯಿ ಭೀಮಣ್ಣ ಕಟ್ಟಿಮನಿ, ಮು: ಇಂಗಳಗಿ ಪೋ: ಅಗರಖೇಡ ತಾ: ಇಂಡಿ, ಜಿ: ವಿಜಾಪುರ-586111 | ಎಸ್‌ಸಿ | 22.07.1965 | 37.01.15 | S.S.L.C. 71.667 | ಉಪನೋಂದಣಿ ಕಛೇರಿ ಕಾರ್ಕಳ ಉಡುಪಿ ಜಿಲ್ಲೆ | ಪರಿಶಿಷ್ಟ ಜಾತಿ ಗ್ರಾಮೀಣ ಅಭ್ಯರ್ಥಿ ಮುಖ್ಯಪಟ್ಟಿ. |

ಎಸ್.ಎಸ್.ಎಲ್.ಸಿ. ಅಂಕಪಟ್ಟಿಯ ನೋಂದಣಿ ಸಂಖ್ಯೆ: 225687/ ಏಪ್ರಿಲ್ 1990 (ವರ್ಷ)ದ ಪ್ರಕಾರ ನಾಗರಾಜ ಬಿ. ಓಲೇಕಾರ ಇವರ ಜನ್ಮ ದಿನಾಂಕವು 20.10.1972 ಮತ್ತು ಎಸ್.ಎಸ್.ಎಲ್.ಸಿ ಅಂಕಪಟ್ಟಿ ನೋಂದಣಿ ಸಂಖ್ಯೆ: 193535/ ಏಪ್ರಿಲ್ 1990ದ ಪ್ರಕಾರ ಪುಂಡಲೀಕ ಮಾರುತಿ ಕೆಂಪರಾಯಗೋಳ ಇವರ ಜನ್ಮ ದಿನಾಂಕವು 01.08.1973 ಹಾಗೂ ಎಸ್.ಎಸ್.ಎಲ್.ಸಿ. ಅಂಕಪಟ್ಟಿ ನೋಂದಣಿ ಸಂಖ್ಯೆ: 157936/ ಏಪ್ರಿಲ್ 1985ದ ಪ್ರಕಾರ ಲಕ್ಷ್ಮಣ ಭೀಮಣ್ಣ ಕಟ್ಟೀಮನಿ ಇವರ ಜನ್ಮ ದಿನಾಂಕವು 22.07.1965 ಆಗಿರುತ್ತದೆ.

ಈ ನೇಮಕಾತಿ ಆದೇಶವು ಕೆಳಕಂಡ ಷರತ್ತುಗಳಿಗೆ ಒಳಪಟ್ಟಿರುತ್ತದೆ ಮತ್ತು ಅಭ್ಯರ್ಥಿಗಳು ಈ ಷರತ್ತುಗಳಿಗೆ ಬದ್ಧರಾಗಿರತಕ್ಕದ್ದು.

**ಷರತ್ತುಗಳು:**

1. ಈ ನೇಮಕಾತಿಯು ತಾತ್ಕಾಲಿಕವಾಗಿದ್ದು ಸದರಿ ಅಭ್ಯರ್ಥಿಗಳನ್ನು ಯಾವುದೇ ನೋಟೀಸ್ ಅಥವಾ ಕಾರಣ ನೀಡದೇ ಯಾವುದೇ ಘಳಿಗೆಯಲ್ಲಾದರೂ ಕೆಲಸದಿಂದ ತೆಗೆದುಹಾಕುವ ಷರತ್ತಿಗೆ ಒಳಪಟ್ಟು ನೇಮಕಾತಿ ಮಾಡಲಾಗಿದೆ.
2. ಸದರಿ ಅಭ್ಯರ್ಥಿಗಳನ್ನು ಕರ್ನಾಟಕ ನಾಗರೀಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳು 1977 ರಲ್ಲಿನ ನಿಬಂಧನೆಗಳಿಗೆ ಒಳಪಡಿಸಿ ಮತ್ತು ಕರ್ತವ್ಯಕ್ಕೆ ಹಾಜರಾದ ದಿನಾಂಕದಿಂದ ಎರಡು ವರ್ಷದ ಅರ್ಹತಾ ಪರೀಕ್ಷಾ ಅವಧಿಗೆ ಒಳಪಡಿಸಿ ತಾತ್ಕಾಲಿಕವಾಗಿ ನೇಮಕ ಮಾಡಲಾಗಿದೆ.
3. ಈ ನೇಮಕಾತಿಯು ಆಗಿಂದಾಗ್ಗೆ ಜಾರಿಯಲ್ಲಿರುವ ಸೇವಾ ಷರತ್ತುಗಳು, ನಿಯಮ ಮತ್ತು ಆದೇಶಗಳಿಗೆ ಒಳಪಡುತ್ತದೆ ಹಾಗೂ ಸದರಿ ಅಭ್ಯರ್ಥಿಗಳು ಕೆ.ಸಿ.ಎಸ್.ಆರ್. ಮತ್ತು ಕೆ.ಸಿ.ಎಸ್. (ನಡತೆ) ನಿಯಮಗಳು 1966 ರಲ್ಲಿನ ಮತ್ತು ಕೆ.ಸಿ.ಎಸ್. (ಸಿ.ಸಿ.ಎ) ನಿಯಮಗಳು 1957 ರಲ್ಲಿನ ಹಾಗೂ ಆಗಿಂದಾಗ್ಗೆ ಜಾರಿಗೆ ಬರುವ ಹಾಗೂ ಜಾರಿಯಲ್ಲಿರುವ ಇತರೆ ಸೇವಾ ಷರತ್ತುಗಳಿಗೆ ಮತ್ತು ನಿಬಂಧನೆಗಳಿಗೆ ಒಳಪಡುತ್ತಾರೆ.
4. ಈ ಆದೇಶ ಮುಟ್ಟಿದ 15 (ಹದಿನೈದು) ದಿನಗಳ ಅವಧಿಯೊಳಗೆ ಅಭ್ಯರ್ಥಿಯು ಕೆಲಸಕ್ಕೆ ಹಾಜರಾಗತಕ್ಕದ್ದು. ಒಂದು ವೇಳೆ ನಿಗದಿತ ಅವಧಿಯೊಳಗೆ ಕೆಲಸಕ್ಕೆ ಹಾಜರಾಗದಿದ್ದಲ್ಲಿ ಈ ನೇಮಕಾತಿ ರದ್ದಾಗುವುದು ಹಾಗೂ ನೇಮಕಾತಿ ಬಗ್ಗೆ ಅಭ್ಯರ್ಥಿಯು ಯಾವ ಹಕ್ಕನ್ನೂ ಹೊಂದಿರುವುದಿಲ್ಲವೆಂದು ತಿಳಿಯತಕ್ಕದ್ದು.
5. ಅರ್ಹತಾ ಪರೀಕ್ಷಾ ಅವಧಿಯು ಎರಡು ವರ್ಷಗಳೆಂದು ನಿಗದಿಪಡಿಸಿದೆ. ಈ ಅವಧಿಯೊಳಗೆ 1974ರ ಕರ್ನಾಟಕ ನಾಗರೀಕ ಸೇವಾ (ಸೇವಾ ಮತ್ತು ಕನ್ನಡ ಭಾಷಾ ಪರೀಕ್ಷೆಗಳು) ನಿಯಮಾವಳಿಯಲ್ಲಿ ಈ ಇಲಾಖೆಯ ದ್ವಿತೀಯ ದರ್ಜೆ ಸಹಾಯಕರ ಹುದ್ದೆಗಳಿಗೆ ನಿಗದಿಪಡಿಸಿದ ಇಲಾಖಾ ಪರೀಕ್ಷೆಗಳಲ್ಲಿ ಅಭ್ಯರ್ಥಿಯು ಕಡ್ಡಾಯವಾಗಿ ತೇರ್ಗಡೆ ಹೊಂದತಕ್ಕದ್ದು. ಇದಕ್ಕೆ ತಪ್ಪಿದಲ್ಲಿ ಕೆ.ಸಿ.ಎಸ್. (ಪ್ರೊಬೇಷನ್) ರೂಲ್ಸ್ 1977ರ ಅಡಿಯಲ್ಲಿ ಕಟ್ಟುನಿಟ್ಟಿನ ಕ್ರಮ ಜರುಗಿಸಲಾಗುವುದು.
6. ಅಭ್ಯರ್ಥಿಯು ತಮಗೆ ವಹಿಸಿದ ಕೆಲಸ ಕಾರ್ಯಗಳನ್ನು ತೃಪ್ತಿಕರವಾಗಿ ಮಾಡತಕ್ಕದ್ದು.
7. ವಿದ್ಯಾರ್ಹತೆಯ ಬಗ್ಗೆ ಇರುವ ಮೂಲ ಪ್ರಮಾಣ ಪತ್ರಗಳನ್ನು ಹಾಜರಾಗುವ ಕಛೇರಿಯಲ್ಲಿ ಆ ಕಛೇರಿಯ ಮುಖ್ಯಸ್ಥರ ಮುಂದೆ ಹಾಜರುಪಡಿಸತಕ್ಕದ್ದು.
8. ಜನ್ಮ ದಿನಾಂಕದ ಬಗ್ಗೆ ಮೂಲ ಪ್ರಮಾಣ ಪತ್ರವನ್ನು ಹಾಜರಾಗುವ ಕಛೇರಿಯಲ್ಲಿ ಆ ಕಛೇರಿಯ ಮುಖ್ಯಸ್ಥರ ಮುಂದೆ ಹಾಜರುಪಡಿಸತಕ್ಕದ್ದು.
9. ಭಾರತದ ಸಂವಿಧಾನಕ್ಕೆ ಬದ್ಧರಾಗಿರುವ ಬಗ್ಗೆ ನಿಷ್ಠೆ ಪ್ರಮಾಣ ಪತ್ರಗಳನ್ನು (ಪ್ರತಿಜ್ಞಾ ವಿಧಿ) ಬರೆದು ಕೊಡತಕ್ಕದ್ದು.
10. ಕೆಲಸಕ್ಕೆ ಹಾಜರಾಗುವ ಮುನ್ನ ಅಭ್ಯರ್ಥಿಯು ಸಂಬಂಧಪಟ್ಟ ಜಿಲ್ಲಾ ಸರ್ಜನ್‌ನಿಂದ ದೈಹಿಕ ಪ್ರಮಾಣಪತ್ರವನ್ನು ನಿಗದಿತ ನಮೂನೆಯಲ್ಲಿ ಪಡೆದು ಹಾಜರಾಗುವ ಕಛೇರಿಯಲ್ಲಿ ಆ ಕಛೇರಿಯ ಮುಖ್ಯಸ್ಥರ ಮುಂದೆ ಹಾಜರುಪಡಿಸತಕ್ಕದ್ದು.
11. ಅಭ್ಯರ್ಥಿಯು ಕಡೆಯದಾಗಿ ಹಾಜರಾಗಿದ್ದ ಶಾಲೆಯ ಮುಖ್ಯೋಪಾಧ್ಯಾಯರು ನೀಡಿರುವ ನಡತೆ ಪ್ರಮಾಣ ಪತ್ರವನ್ನು ಹಾಜರಾಗುವ ಕಛೇರಿಯಲ್ಲಿ ಆ ಕಛೇರಿಯ ಮುಖ್ಯಸ್ಥರ ಮುಂದೆ ಹಾಜರುಪಡಿಸತಕ್ಕದ್ದು.
12. ಅಭ್ಯರ್ಥಿಯು ಮದುವೆಯಾಗಿದ್ದಲ್ಲಿ ಒಬ್ಬರೇ ಪತಿ ಅಥವಾ ಪತ್ನಿ ಹೊಂದಿರುವ ಬಗ್ಗೆ ಕೆ.ಸಿ.ಎಸ್. (ನಡತೆ) ನಿಯಮಗಳು 1966 ರಲ್ಲಿನ ನಿಯಮ 28ರ ರೀತ್ಯಾ ಹಾಜರಾಗುವ ಕಛೇರಿಯಲ್ಲಿ ಆ ಕಛೇರಿಯ ಮುಖ್ಯಸ್ಥರ ಮುಂದೆ ಘೋಷಣೆ ಹಾಜರುಪಡಿಸತಕ್ಕದ್ದು.

13. ಅಭ್ಯರ್ಥಿಯು ತಮ್ಮ ಜಾತಿ, ಜನ್ಮ ದಿನಾಂಕ ವಿದ್ಯಾರ್ಹತೆ ಇತ್ಯಾದಿಯಾಗಿ ಯಾವುದೇ ವಿಚಾರದಲ್ಲಿ ಅಭ್ಯರ್ಥಿಯು ನೀಡಿರುವ ವಿವರಗಳು ಸುಳ್ಳೆಂದಾಗಲೀ ಅಥವಾ ತಪ್ಪೆಂದಾಗಲೀ ತಿಳಿದು ಬಂದಲ್ಲಿ ಅಂತಹ ಅಭ್ಯರ್ಥಿಯ ವಿರುದ್ಧ ಭಾರತೀಯ ದಂಡ ಸಂಹಿತೆಯಲ್ಲಿನ ಸೂಕ್ತ ಕಲಂಗಳ ಅಡಿಯಲ್ಲಿ ಕ್ರಮ ಕೈಗೊಳ್ಳಲಾಗುವುದು ಹಾಗೂ ಕೆ.ಸಿ.ಎಸ್. (ಸಿ.ಸಿ.ಎ) ನಿಯಮಗಳು 1957 ರ ಅಡಿಯಲ್ಲಿ ಶಿಸ್ತು ಕ್ರಮ ಕೈಗೊಳ್ಳಲಾಗುವುದು.
14. ಮಹಿಳಾ ಮೀಸಲಾತಿ ಅಡಿಯಲ್ಲಿ ಆಯ್ಕೆಯಾದ ಎಲ್ಲಾ ಮಹಿಳಾ ಅಭ್ಯರ್ಥಿಗಳು ಗೌರವಾನ್ವಿತ ಭಾರತದ ಸರ್ವೋಚ್ಛ ನ್ಯಾಯಾಲಯದಲ್ಲಿ ದಾಖಲಾಗಿರುವ ರಿಟ್ ಅರ್ಜಿ (ಸಿವಿಲ್) ಸಂಖ್ಯೆ 232/99 (ಶ್ರೀ ಬಿ. ಎಲ್. ನಾರಾಯಣ - Vs - ಕರ್ನಾಟಕ ರಾಜ್ಯ ಮತ್ತು ಇತರರು) ಇದರಲ್ಲಿ ಆಗುವ ಅಂತಿಮ ತೀರ್ಪಿಗೆ ಬದ್ಧರಾಗಿರತಕ್ಕದ್ದು ಹಾಗೂ ದ್ವಿತೀಯ ದರ್ಜೆ ಸಹಾಯಕರ ಹುದ್ದೆಯ ಮೇಲೆ ಯಾವುದೇ ಹಕ್ಕನ್ನು ಹೊಂದಿರತಕ್ಕದಲ್ಲ ಅಥವಾ ಯಾವುದೇ ಹಕ್ಕನ್ನು ಸಾಧಿಸತಕ್ಕದ್ದಲ್ಲವೆಂದು ತಿಳಿಯತಕ್ಕದ್ದು ಹಾಗೂ ಸದರಿ ರಿಟ್ ಅರ್ಜಿ (ಸಿವಿಲ್) ಸಂಖ್ಯೆ: 232/99 ರಲ್ಲಿ ಆಗುವ ಅಂತಿಮ ತೀರ್ಪಿಗೆ ಬದ್ಧಳಾಗಿರುತ್ತೇನೆ ಎಂಬ ಬಗ್ಗೆ 20/- ರೂ.ಗಳ ಛಾಪಾ ಕಾಗದದಲ್ಲಿ ಮುಚ್ಚಳಿಕೆ ನಮೂನೆ-3ನ್ನು ಈ ಕಛೇರಿಗೆ ಬರೆದು ಕೊಡತಕ್ಕದ್ದು.
15. ಅಭ್ಯರ್ಥಿಗಳು ಸಲ್ಲಿಸಿರುವ ಅಂಕಪಟ್ಟಿಗಳು ಮತ್ತು ಮೀಸಲಾತಿ ಪ್ರಮಾಣ ಪತ್ರಗಳು ಹಾಗೂ ಜಾತಿ ಪ್ರಮಾಣ ಪತ್ರಗಳು ಸಕ್ಷಮ ಪ್ರಾಧಿಕಾರದಿಂದ ಸತ್ಯಾಪನೆಗೆ ಒಳಪಡುತ್ತವೆ.
16. ಒಂದು ವೇಳೆ ಅಭ್ಯರ್ಥಿಯು ಸಲ್ಲಿಸಿರುವ ಅಂಕಪಟ್ಟಿಗಳು ಮತ್ತು ಮೀಸಲಾತಿ ಪ್ರಮಾಣ ಪತ್ರಗಳು ಹಾಗೂ ಜಾತಿ ಪ್ರಮಾಣ ಪತ್ರಗಳು ಸುಳ್ಳು ಅಥವಾ ನಕಲಿ ಎಂದು ದೃಢಪಟ್ಟಲ್ಲಿ ಅಂತಹ ಅಭ್ಯರ್ಥಿಗಳ ಆಯ್ಕೆಯನ್ನು ಮತ್ತು ನೇಮಕಾತಿಯನ್ನು ಶಾಶ್ವತವಾಗಿ ರದ್ದುಪಡಿಸಲಾಗುವುದು ಹಾಗೂ ಅಭ್ಯರ್ಥಿಯ ವಿರುದ್ಧ ಭಾರತೀಯ ದಂಡ ಸಂಹಿತೆಯಲ್ಲಿನ ಸೂಕ್ತ ಕಲಂಗಳ ಅಡಿಯಲ್ಲಿ ಕ್ರಮ ಕೈಗೊಳ್ಳಲಾಗುವುದು ಹಾಗೂ KCS (CCA) ನಿಯಮಗಳು 1957 ರ ಅಡಿಯಲ್ಲಿ ಶಿಸ್ತು ಕ್ರಮ ಕೈಗೊಳ್ಳಲಾಗುವುದು ಇದಕ್ಕೆ ಬದ್ದನಾಗಿರುತ್ತೇನೆ ಎಂಬ ಬಗ್ಗೆ ಅಭ್ಯರ್ಥಿಯು 20/- ರೂ.ಗಳ ಛಾಪಾ ಕಾಗದದಲ್ಲಿ ಮುಚ್ಚಳಿಕೆ ನಮೂನೆ-1 ನ್ನು ಈ ಕಛೇರಿಗೆ ಬರೆದು ಕೊಡತಕ್ಕದ್ದು.
17. ಅಭ್ಯರ್ಥಿಗಳು ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಅಭ್ಯರ್ಥಿಗಳಲ್ಲವೆಂದು ಸತ್ಯಾಪನೆಯಿಂದ ದೃಢಪಟ್ಟಲ್ಲಿ ಅಂತಹ ಅಭ್ಯರ್ಥಿಗಳ ನೇಮಕಾತಿಯನ್ನು ಶಾಶ್ವತವಾಗಿ ಯಾವುದೇ ಸೂಚನೆ ಇಲ್ಲದೆ ರದ್ದು ಪಡಿಸಲಾಗುವುದು.
18. ಗ್ರಾಮೀಣ ಮೀಸಲಾತಿ ಅಡಿಯಲ್ಲಿ ಆಯ್ಕೆಗೊಂಡ ಅಭ್ಯರ್ಥಿಗಳು ಗ್ರಾಮೀಣ ಅಭ್ಯರ್ಥಿಗಳಲ್ಲವೆಂದು ಹಾಗೂ ಮಾಜಿ ಸೈನಿಕರ ಮೀಸಲಾತಿಯಲ್ಲಿ ಆಯ್ಕೆಗೊಂಡವರು ಮಾಜಿ ಸೈನಿಕರಲ್ಲವೆಂದು ದೃಢಪಟ್ಟಲ್ಲಿ ಅಂತಹ ಅಭ್ಯರ್ಥಿಗಳ ನೇಮಕಾತಿಯನ್ನು ಶಾಶ್ವತವಾಗಿ ಯಾವುದೇ ಸೂಚನೆ ಇಲ್ಲದೆ ರದ್ದುಪಡಿಸಲಾಗುವುದು.
19. ಇದೇ ರೀತಿ ಯೋಜನಾ ನಿರಾಶ್ರಿತರ ಮೀಸಲಾತಿ ಅಡಿಯಲ್ಲಿ ಆಯ್ಕೆಗೊಂಡವರು ಯೋಜನಾ ನಿರಾಶ್ರಿತ ಅಭ್ಯರ್ಥಿಗಳಲ್ಲವೆಂದು ಮತ್ತು ಅಂಗವಿಕಲರ ಮೀಸಲಾತಿ ಅಡಿಯಲ್ಲಿ ಆಯ್ಕೆಗೊಂಡವರು ಅಂಗವಿಕಲ ಅಭ್ಯರ್ಥಿಗಳಲ್ಲವೆಂದು ದೃಢಪಟ್ಟಲ್ಲಿ ಅಂತಹ ಅಭ್ಯರ್ಥಿಗಳ ನೇಮಕಾತಿಯನ್ನು ಶಾಶ್ವತವಾಗಿ ಯಾವುದೇ ಸೂಚನೆ ಇಲ್ಲದೆ ರದ್ದುಪಡಿಸಲಾಗುವುದು.
20. ಈ ನೇಮಕಾತಿ ಆದೇಶವು ಯಾವುದೇ ಸಂದರ್ಭದಲ್ಲಾದರೂ ತಿದ್ದೋಲೆ ಮತ್ತು ಮಾರ್ಪಾಡಿಗೆ ಒಳಪಟ್ಟಿರುತ್ತದೆ.
21. ನೇಮಕಾತಿ ಮಾಡಿರುವ ಸ್ಥಳದ ಅಥವಾ ಕಛೇರಿಯ ಮಾರ್ಪಾಡಿಗಾಗಿ ಯಾವುದೇ ಮನವಿಗಳನ್ನು ಯಾವುದೇ ಕಾರಣಕ್ಕಾಗಲೀ ಪುರಸ್ಕರಿಸಲಾಗುವುದಿಲ್ಲ.
22. ಅಭ್ಯರ್ಥಿಯು KGID ಯಲ್ಲಿ ಸರ್ಕಾರಿ ವಿಮೆಯನ್ನು ಕಡ್ಡಾಯವಾಗಿ ಮಾಡತಕ್ಕದ್ದು.
23. ಈ ನೇಮಕಾತಿಗಾಗಿ ಅರ್ಜಿಸಲ್ಲಿಸಿರುವ ಅಭ್ಯರ್ಥಿಗಳ ಪೈಕಿ ಬೇರೆ ಇನ್ನಾವುದೇ ಅಭ್ಯರ್ಥಿಯು ಅವರ ಆಯ್ಕೆಯನ್ನು ದಾಖಲೆ ಸಹಿತ establish ಮಾಡಿದಲ್ಲಿ ಅಥವಾ ನನ್ನ ನೇಮಕಾತಿಯು ಅಸಿಂಧುವೆಂದು ದಾಖಲೆಗಳ ಸಹಿತ ಸಾಬೀತುಪಡಿಸಿದಲ್ಲಿ ನನ್ನ ನೇಮಕಾತಿಯನ್ನು ಯಾವುದೇ ಸೂಚನೆ ಇಲ್ಲದೇ ಶಾಶ್ವತವಾಗಿ ರದ್ದುಗೊಳಿಸಿ ನನ್ನ ಬದಲಿಗೆ ಬೇರೊಬ್ಬರನ್ನು ಆಯ್ಕೆ ಮಾಡಬಹುದು ಎಂಬ ಬಗ್ಗೆ ಅಭ್ಯರ್ಥಿಯು 20/- ರೂ. ಛಾಪಾ ಕಾಗದದಲ್ಲಿ ಮುಚ್ಚಳಿಕೆ ನಮೂನೆ-2 ನ್ನು ಈ ಕಛೇರಿಗೆ ಬರೆದುಕೊಡತಕ್ಕದ್ದು.
24. ಎರಡು ವರ್ಷದ ಪರೀಕ್ಷಾರ್ಥ ಅವಧಿಯಲ್ಲಿ ಅಭ್ಯರ್ಥಿಗಳು ತಮ್ಮ ವರ್ಗಾವಣೆಗಾಗಿ ರಾಜಕೀಯ ಅಥವಾ ಇನ್ನಾವುದೇ ರೀತಿಯ ಒತ್ತಡ ತಂದಲ್ಲಿ ಅಂತಹವರ ವಿರುದ್ಧ ಕಾನೂನು ರೀತ್ಯಾ ಶಿಸ್ತು ಕ್ರಮ ಜರುಗಿಸಲಾಗುವುದು.

ನೇಮಕಾತಿ ಪ್ರಾಧಿಕಾರಿ ಹಾಗೂ ಜಿಲ್ಲಾ ನೋಂದಣಾಧಿಕಾರಿಗಳು,
ಉಡುಪಿ ಜಿಲ್ಲೆ, ಉಡುಪಿ.

ಪಿ.ಆರ್.107

**ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಚಿತ್ರದುರ್ಗ ವಿಭಾಗ, ಚಿತ್ರದುರ್ಗ ಇವರ ಪ್ರಾಧಿಕಾರ**

**ಉಪಸ್ಥಿತರು :** ಜಿ. ಎಸ್. ಕರಿಯಪ್ಪ, ಭಾಅಸೇ, ಉಪ ಅರಣ್ಯ ಸಂರಕ್ಷಣಾಧಿಕಾರಿ, ಚಿತ್ರದುರ್ಗ ವಿಭಾಗ, ಚಿತ್ರದುರ್ಗ.

**ಪಿರ್ಯಾದುದಾರರು** **ವಿರುದ್ಧ** **ಆರೋಪಿಗಳು:**

1. ಪೊಲೀಸ್ ನಿರೀಕ್ಷಕರು
   ಡಿ. ಸಿ. ಐ. ಬಿ, ಚಿತ್ರದುರ್ಗ

1. ಶ್ರೀ ಮಹೇಶ್ ತಂದೆ ಮಲ್ಲಪ್ಪ
   ಹರಗಿ ಗ್ರಾಮ, ವಿದ್ಯಾನಗರ ಪೋಸ್ಟ್ ಶಿವಮೊಗ್ಗ.
2. ಶ್ರೀ ಮಹೇಶ್ ತಂದೆ ರಾಮಣ್ಣ
   ಕೋಳೂರು, ತೀರ್ಥಹಳ್ಳಿ ತಾ: ಶಿವಮೊಗ್ಗ ಜಿಲ್ಲೆ.
3. ಶ್ರೀ ಸುಧಾಕರ ಮೃಗವದೆ, ತೀರ್ಥಹಳ್ಳಿ ತಾ: ಶಿವಮೊಗ್ಗ ಜಿಲ್ಲೆ
4. ಶ್ರೀ ಬಸವರಾಜ ಆಟೋಚಾಲಕ ವಿದ್ಯಾನಗರ, ಶಿವಮೊಗ್ಗ ಜಿಲ್ಲೆ
5. ಶ್ರೀ ನಾಗರಾಜ ಕಾರು ಚಾಲಕ ವಿದ್ಯಾನಗರ, ಶಿವಮೊಗ್ಗ ಜಿಲ್ಲೆ.

**ವಾಹನದ ಮಾಲೀಕರು :** ಶ್ರೀ ಎನ್.ಎಸ್. ಮೋಹನ್ ತಂದೆ ಶಿವಮೂರ್ತಿ ಸ್ವಾಮಿ, ಮಾತೃಛಾಯ, 2ನೇ ತಿರುವು ವಿವೇಕಾನಂದ ನಗರ, ಸವಳಂಗಿ ರಸ್ತೆ, ಶಿವಮೊಗ್ಗ.

**ಅರ್ಜಿದಾರರ ಪರ ವಕೀಲರು :** 1. ಶ್ರೀ ಜಿ. ಕೆ. ಗೋಕುಲ್ ವಕೀಲರು, ಶಿವಮೊಗ್ಗ.
2. ಶ್ರೀ ಸಿ. ಜೆ. ಲಕ್ಷ್ಮಿನರಸಿಂಹ ವಕೀಲರು, ಚಿತ್ರದುರ್ಗ.

**ಪ್ರಕರಣದ ಹಿನ್ನಲೆ:**

ದಿನಾಂಕ: 10.5.2000 ರಂದು ಸಾಯಂಕಾಲ 3.15 ಗಂಟೆ ಸಮಯದಲ್ಲಿ ಶ್ರೀ ಬಿ. ಪಿ. ಹೂಗಾರ, ಪೊಲೀಸ್ ಇನ್‌ಸ್ಪೆಕ್ಟರ್ ರವರು ಡಿ.ಸಿ.ಐ.ಬಿ ಕಛೇರಿಯಲ್ಲಿ ಇರುವಾಗ ಭಾತ್ಮೀದಾರರಿಂದ ಶಿವಮೊಗ್ಗದಿಂದ ಅಮರಾಪುರಕ್ಕೆ ಸಿಟಿಕ್ಯೂ-7625ನೇ ರಿಜಿಸ್ಟ್ರೇಷನ್ ಸಂಖ್ಯೆವುಳ್ಳ ಕಾರಿನಲ್ಲಿ ಶ್ರೀಗಂಧ ತುಂಡುಗಳ ಕಳ್ಳಸಾಗಾಣಿಕೆ ನಡೆಯುತ್ತಿದೆ ಎಂದು ಖಚಿತ ವರ್ತಮಾನ ದೊರೆತಿದ್ದರಿಂದ ಇಲಾಖಾ ವಾಹನ ಜೀಪ್ ಸಂಖ್ಯೆ: ಕೆಎ-32 ಜಿ-10 ರಲ್ಲಿ ಪಂಚಾಯ್ತಿದಾರರು ಹಾಗೂ ಸಿಬ್ಬಂದಿ ವರ್ಗದೊಂದಿಗೆ ಚಿತ್ರದುರ್ಗದಿಂದ ಹೊಳಲ್ಕೆರೆಗೆ ಹೋಗುವ ರಸ್ತೆಯಲ್ಲಿ ದೇವಪುರದ ಹಟ್ಟಿ ಹತ್ತಿರವಿರುವ ದುರ್ಗಾಗಾರ್ಡನ್ ಹೋಟಲ್ ಸಮೀಪ ರಸ್ತೆಯಲ್ಲಿ ಜೀಪನ್ನು ನಿಲ್ಲಿಸಿಕೊಂಡು ಕಾಯುತ್ತಿರುವಾಗ್ಗೆ, ಸಂಜೆ ಸುಮಾರು 4.00 ಗಂಟೆ ಸಮಯದಲ್ಲಿ ಭಾತ್ಮೀದಾರರಿಂದ ಬಂದ ವರ್ತಮಾನದಂತೆ, ಹೊಳಲ್ಕೆರೆ ಕಡೆಯಿಂದ ಬಂದ ಅಂಬಾಸಿಡರ್ ಕಾರು ಸಂಖ್ಯೆ: ಸಿಟಿಕ್ಯೂ-7625 ನ್ನು ತಡೆದು ನಿಲ್ಲಿಸಿದಾಗ ಕಾರಿನ ಚಾಲಕ ಮತ್ತು ಇಬ್ಬರು ತಪ್ಪಿಸಿಕೊಂಡು ಓಡಿಹೋಗಿರುತ್ತಾರೆ. ಕಾರಿನಲ್ಲಿದ್ದ ಇನ್ನೂ ಇಬ್ಬರು ಆರೋಪಿಗಳು ಓಡಲು ಪ್ರಯತ್ನಿಸಿದಾಗ ಪೊಲೀಸ್ ಸಿಬ್ಬಂದಿಯು ಇಬ್ಬರನ್ನು ವಶಕ್ಕೆ ತೆಗೆದುಕೊಂಡಿರುತ್ತಾರೆ. ಸಿಕ್ಕಿಬಿದ್ದವರ ಹೆಸರು ವಿಚಾರಿಸಲಾಗಿ (1) ಶ್ರೀ ಮಹೇಶ್ ತಂದೆ ಮಲ್ಲಪ್ಪ, ಹರಗಿ ಗ್ರಾಮ, ಶಿವಮೊಗ್ಗ ಜಿಲ್ಲೆ (2) ಶ್ರೀ ಮಹೇಶ್ ತಂದೆ ರಾಮಣ್ಣ, ಕೋಳೂರು, ತೀರ್ಥಹಳ್ಳಿ ತಾ: ಶಿವಮೊಗ್ಗ ಜಿಲ್ಲೆ ಎಂದು ತಿಳಿದು ಬಂದಿರುತ್ತದೆ. ಓಡಿ ತಪ್ಪಿಸಿಕೊಂಡವರ ಹೆಸರು ವಿಳಾಸ ವಿಚಾರಿಸಲಾಗಿ (1) ಶ್ರೀ ಸುಧಾಕರ, ತೀರ್ಥಹಳ್ಳಿ ತಾ: ಶಿವಮೊಗ್ಗ ಜಿಲ್ಲೆ (2) ಶ್ರೀ ಬಸವರಾಜ, ಆಟೋ ಚಾಲಕ, ವಿದ್ಯಾನಗರ, ಶಿವಮೊಗ್ಗ (3) ಶ್ರೀ ನಾಗರಾಜ, ಕಾರು ಚಾಲಕ, ವಿದ್ಯಾನಗರ, ಶಿವಮೊಗ್ಗ ಎಂಬುದಾಗಿ ತಿಳಿದು ಬಂದಿರುತ್ತದೆ. ನಂತರ ಕಾರನ್ನು ತಪಾಸಣೆ ಮಾಡಿದಾಗ ಕಾರಿನಲ್ಲಿ 5 ಗೋಣಿ ಚೀಲಗಳಲ್ಲಿ ಶ್ರೀಗಂಧದ ತುಂಡುಗಳು ಕಂಡು ಬಂದಿರುತ್ತವೆ.

ನಂತರ ಪಂಚರ ಸಮಕ್ಷಮ ಸಿಟಿಕ್ಯೂ-7625 ಅಂಬಾಸಿಡರ್ ಕಾರು ಹಾಗೂ ಕಾರಿನ ಒಳಗಡೆ ಹಿಂಭಾಗದ ಸೀಟಿನ ಮುಂಭಾಗ ಮತ್ತು ಕೆಳಗಡೆ ಗಂಧದ ಮರದ ಸಣ್ಣ ತುಂಡುಗಳು ಇದ್ದವು, ಸದರಿ ಶ್ರೀಗಂಧದ ತುಂಡುಗಳನ್ನು ಹೊರತೆಗೆದು ಅವುಗಳ ಉದ್ದ ಸುತ್ತಳತೆಗಳನ್ನು ಅಳತೆ ಮಾಡಿ A1 ರಿಂದ A45 ರವರೆಗೆ ನಂಬರ್ ನೀಡಲಾಗಿದೆ ಒಟ್ಟು 45 ಶ್ರೀಗಂಧದ ತುಂಡುಗಳನ್ನು ಗೋಣಿ ಚೀಲದಲ್ಲಿ ತುಂಬಿ ಚೀಲದ ಮೇಲೆ 'A' ಎಂದು ಬರೆಯಲಾಗಿದೆ. ಕಾರಿನ ಡಿಕ್ಕಿಯಲ್ಲಿ ದೊರೆತ ಶ್ರೀಗಂಧದ ಮರದ ಬೇರುಗಳು ಹಾಗೂ ತುಂಡುಗಳನ್ನು ನಂಬರಿಂಗ್ ಮಾಡದೆ ನಾಲ್ಕು ಗೋಣಿ ಚೀಲಗಳಲ್ಲಿ ತುಂಬಿಸಿ ಚೀಲದ ಮೇಲೆ 'B','C','D' ಮತ್ತು 'E' ಎಂದು ಬರೆಯಲಾಗಿದೆ. ಈ ಐದು ಚೀಲಗಳಲ್ಲಿರುವ ಶ್ರೀಗಂಧದ ಒಟ್ಟು ತೂಕ ಸುಮಾರು 157 ಕೆ. ಜಿ. ಇರುತ್ತದೆ.

ನಂತರ ಸಿಟಿಕ್ಯೂ-7625 ನೋಂದಾಣಿ ಸಂಖ್ಯೆಯ ಕಾರನ್ನು ಮತ್ತು ಶ್ರೀಗಂಧದ ತುಂಡುಗಳನ್ನು ಅಮಾನತ್ತುಪಡಿಸಿಕೊಂಡು ಕಲಂ 86,87 ಕರ್ನಾಟಕ ಅರಣ್ಯ ಕಾಯ್ದೆ-1963ರ ರೀತ್ಯಾ ಕೇಸನ್ನು ಚಿತ್ರದುರ್ಗ ಗ್ರಾಮಾಂತರ ಠಾಣೆ ಗುನ್ನೆ ನಂ. 196/2000 ರಲ್ಲಿ ಕೇಸು ದಾಖಲಿಸಲಾಗಿದೆ. ಪ್ರಥಮ ವರ್ತಮಾನ ವರದಿಯನ್ನು ಸಂಬಂಧಿಸಿದ ನ್ಯಾಯಾಲಯಕ್ಕೆ ಸಲ್ಲಿಸಿ ಆರೋಪಿಯನ್ನು ನ್ಯಾಯಾಲಯಕ್ಕೆ ಹಾಜರುಪಡಿಸಿರುತ್ತದೆ. ಮಹಜರ್ ಕ್ರಮವನ್ನು ದಿನಾಂಕ: 10.5.2000 ರಂದು ಸಾಯಂಕಾಲ 4.00 ಗಂಟೆಯಿಂದ 6.00 ಗಂಟೆಯವರೆಗೆ ಜರುಗಿಸಿರುತ್ತಾರೆ. ನಂತರ ಅಮಾನತ್ತುಪಡಿಸಿಕೊಂಡ ವಾಹನ ಅಂಬಾಸಿಡರ್ ಕಾರು ಸಂಖ್ಯೆ: ಸಿಟಿಕ್ಯೂ-7625 ಮತ್ತು ಸುಮಾರು 157 ಕೆ. ಜಿ. ಶ್ರೀಗಂಧವನ್ನು ಈ ಪ್ರಾಧಿಕಾರಕ್ಕೆ ಹಾಜರುಪಡಿಸಿ ಮುಂದಿನ ಕ್ರಮ ಜರುಗಿಸಲು ಕೋರಿರುತ್ತಾರೆ.

ಈ ಪ್ರಾಧಿಕಾರವು ಸದರಿ ಕಾರನ್ನು ಮತ್ತು ಸುಮಾರು 157 ಕೆ. ಜಿ. ಶ್ರೀಗಂಧವನ್ನು ತನ್ನ ವಶದಲ್ಲಿಟ್ಟುಕೊಂಡಿರುವಂತೆ ವಲಯ ಅರಣ್ಯಾಧಿಕಾರಿ, ಚಿತ್ರದುರ್ಗ ವಲಯ, ಚಿತ್ರದುರ್ಗ ಇವರಿಗೆ ಸೂಚಿಸಿರುತ್ತದೆ. ಅಮಾನತ್ತುಪಡಿಸಿಕೊಂಡ ಕಾರಿನ ಮಾಲೀಕರು ಶ್ರೀ ಎನ್. ಎಸ್. ಮೋಹನ್ ಬಿನ್ ಶಿವಮೂರ್ತಿ ಸ್ವಾಮಿ, ವಿವೇಕಾನಂದ ನಗರ, 2ನೇ ಕ್ರಾಸ್, ಮಾತೃಛಾಯ, ಸವಳಂಗ ರಸ್ತೆ, ಶಿವಮೊಗ್ಗ ಇವರು ಎಂಬುದಾಗಿ ಸಹಾಯಕ ಪ್ರಾದೇಶಿಕ ಸಾರಿಗೆ ಅಧಿಕಾರಿ, ಸಾಗರ ಇವರು ನೀಡಿರುವ ವಾಹನದ 'ಬಿ' ಎಕ್ಸ್‌ಟ್ರಾಕ್ಟ್‌ನಿಂದ ತಿಳಿದು ಬಂದಿರುತ್ತದೆ. ವಾಹನದ ಚಾಸ್ಸಿ ಸಂಖ್ಯೆ: 111-586149 ಇಂಜೀನ್ ಸಂಖ್ಯೆ: 6 ED-046526 ಇರುತ್ತದೆ. ವಾಹನದ ಮಾಲೀಕರಿಗೆ ವಾಹನವು ಶ್ರೀಗಂಧ ಕಳ್ಳಸಾಗಾಣಿಕೆಯಲ್ಲಿ ತೊಡಗಿದ್ದರಿಂದ ವಾಹನವನ್ನು ಸರ್ಕಾರದ ಪರವಾಗಿ ಏಕೆ ಮುಟ್ಟುಗೋಲು ಹಾಕಿಕೊಳ್ಳಬಾರದು ಎಂಬುದಕ್ಕೆ ಕಾರಣ ನೀಡುವಂತೆ ಒಂದು ವಾರದ ಕಾಲಾವಕಾಶ ನೀಡಿ, ನೋಟೀಸ್ ಜಾರಿ ಮಾಡಲಾಗಿತ್ತು. ವಾಹನದ ಮಾಲೀಕರಾದ ಶ್ರೀ ಎನ್. ಎಸ್. ಮೋಹನ್ ರವರು ವಾಹನವನ್ನು ಮಧ್ಯಂತರ ವಶಕ್ಕೆ ನೀಡಬೇಕೆಂದು ಮಾಡಿಕೊಂಡಿದ್ದ ಮನವಿಯನ್ನು ಈ ಪ್ರಾಧಿಕಾರದಿಂದ ದಿನಾಂಕ: 28.1.2002ರ ಆದೇಶದಲ್ಲಿ ತಿರಸ್ಕರಿಸಿರುತ್ತದೆ.

ನಂತರ ಈ ಪ್ರಕರಣದ ವಿಚಾರಣೆಯನ್ನು ಪ್ರಾರಂಭಿಸಿ ದಿನಾಂಕ: 13.11.2001, 28.11.2001, 30.11.2001, 20.12.2001, 9.1.2002, 12.1.2004, 22.1.2004, 4.2.2004, 12.2.2004, 24.2.2004, 9.3.2004, 17.3.2004, 24.3.2004, 28.4.2004, 27.7.2004, 10.8.2004, 7.9.2004, 21.9.2004, 18.10.2004, 30.11.2004 ಮತ್ತು 23.12.2004 ರಂದು ಸಾಕ್ಷಿಗಳ ವಿಚಾರಣೆ ನಡೆಸಲಾಯಿತು ಮತ್ತು ಲಿಖಿತ ವಾದಗಳ ಪರಿಶೀಲನೆ ಮಾಡಲಾಯಿತು.

**ಅಭಿಯೋಜನೆ ಪರವಾಗಿ ಸಾಕ್ಷಿಗಳು:**

1. ಶ್ರೀ ಕೆ. ಮಂಜುನಾಥ್‌ನಾಯ್ಕ್ ಬಿನ್ ಕೃಷ್ಣಾನಾಯ್ಕ್, ಉಪಧ್ಯಾಯರು, ಪಂಡರಹಳ್ಳಿ - PW-1
2. ಶ್ರೀ ಬಿ.ಪಿ. ಹೂಗಾರ್ ಬಿನ್ ಪರಪ್ಪ, ಡಿವೈ ಎಸ್.ಪಿ, ಚಳ್ಳಕೆರೆ - PW-2
3. ಶ್ರೀ ಚಂದ್ರಹಾಸ ಲಕ್ಷ್ಮಣ ನಾಯ್ಕ್ ಬಿನ್ ಲಕ್ಷ್ಮಣನಾಯ್ಕ್ ಪೊಲೀಸ್ ಇನ್‌ಸ್ಪೆಕ್ಟರ್, ಸಿಟಿಸಿ, ಗುಲ್ಬರ್ಗ - PW-3
4. ಶ್ರೀ ಎಸ್. ಎನ್. ಆಂಜನೇಯ ಬಿನ್ ಶ್ರೀ ಸಣ್ಣನರಸಪ್ಪ, ಮುಖ್ಯಪೇದೆ. ಭರಮಸಾಗರ ಪೊಲೀಸ್ ಠಾಣೆ, ಭರಮಸಾಗರ - PW-4
5. ಶ್ರೀ ಉಮೇಶ್‌ನಾಯ್ಕ್ ಬಿನ್ ತಿಪ್ಪೇಸ್ವಾಮಿ, ಉದಯ ನೆಟ್‌ವರ್ಕ್‌ನಲ್ಲಿ ಕ್ಯಾಮರಾಮ್ಯಾನ್, ಬೆಂಗಳೂರು - PW-5
6. ಶ್ರೀ ಎಲ್. ಚನ್ನೇಗೌಡ ಬಿನ್ ಶ್ರೀರಂಗೇಗೌಡ, ವಲಯ ಅರಣ್ಯಾಧಿಕಾರಿ, ಜಗಳೂರು. - PW-6

**ಪ್ರತಿವಾದಿ (ಅರ್ಜಿದಾರರ) ಪರವಾಗಿ ಸಾಕ್ಷಿಗಳು:**

1. ಶ್ರೀ ಎನ್. ಎಸ್. ಮೋಹನ್ ತಂದೆ ಶಿವಮೂರ್ತಿಸ್ವಾಮಿ, ಮಾತೃಛಾಯ, 2ನೇ ತಿರುವು, ವಿವೇಕಾನಂದ ನಗರ, ಸವಳಂಗಿ ರೋಡ್, ಶಿವಮೊಗ್ಗ.

ಮೇಲ್ಕಂಡ ಸಾಕ್ಷಿದಾರರುಗಳ ಹೇಳಿಕೆಯನ್ನು ದಾಖಲು ಮಾಡಿಕೊಳ್ಳಲಾಯಿತು. ಅಭಿಯೋಜನೆ ಪರ ಸಹಾಯಕ ಅಭಿಯೋಜಕ ನಿರ್ದೇಶಕರು ಮತ್ತು ಪ್ರತಿವಾದಿಗಳ ಪರವಕೀಲರು ಇವರು ಮಂಡಿಸಿದ ಲಿಖಿತ ವಾದಗಳನ್ನು ಕೂಲಂಕುಶವಾಗಿ ಪರಿಶೀಲಿಸಿ, ಸೂಕ್ತ ನಿರ್ಣಯ ನೀಡಲು ಈ ಕೆಳಕಂಡ ಅಂಶಗಳನ್ನು ಗಣನೆಗೆ ತೆಗೆದುಕೊಳ್ಳಲಾಯಿತು.

**ಅಂಶ-1**

ಈ ಪ್ರಕರಣದಲ್ಲಿ ಅಮಾನತ್ತುಪಡಿಸಿಕೊಳ್ಳಲಾದ ವಾಹನದ ಅಂಬಾಸಿಡರ್ ಕಾರು ನೋಂದಣಿ ಸಂಖ್ಯೆ ಸಿಟಿಕ್ಯೂ-7625ನ್ನು ಶ್ರೀಗಂಧ ಸಮೇತ ಅಮಾನತ್ತುಪಡಿಸಲಾಗಿದೆಯೇ? ಅಮಾನತ್ತುಪಡಿಸುವಾಗ ಕರ್ನಾಟಕ ಅರಣ್ಯ ಕಾಯ್ದೆ-1963ರ ಕಲಂ-62ರ ಪ್ರಕಾರ ಕ್ರಮ ಬದ್ಧವಾಗಿ ಅಮಾನತ್ತುಪಡಿಸಲಾಗಿದೆಯೇ?

**ಅಂಶ-2**

ಅಮಾನತ್ತುಪಡಿಸಿಕೊಂಡ ಅಂಬಾಸಿಡರ್ ಕಾರಿನಲ್ಲಿದ್ದ ಮಾಲು ಸರ್ಕಾರದ ಸ್ವತ್ತು ಎಂದು ಘೋಷಿಸಲಾಗಿರುವ ಶ್ರೀಗಂಧವೇ?

**ಅಂಶ-3**

ಅಮಾನತ್ತುಪಡಿಸಲಾಗಿರುವ ಅಂಬಾಸಿಡರ್ ಕಾರಿನ ಮಾಲೀಕರು ವಾಹನವನ್ನು ಶ್ರೀಗಂಧದ ಕಳ್ಳಸಾಗಾಣಿಕೆಯಲ್ಲಿ ಬಳಸಲಾಗಿರುವುದಿಲ್ಲ ಎಂದು ಸಾಬೀತುಪಡಿಸಿರುವರೇ? ಅಥವಾ ವಾಹನವು ಶ್ರೀಗಂಧ ಕಳ್ಳ ಸಾಗಾಣಿಕೆಗೆ ಬಳಕೆಯಾಗದಂತೆ ವಾಹನದ ಮಾಲೀಕರು ಎಲ್ಲಾ ರೀತಿಯ ಮುಂಜಾಗ್ರತೆ ಕ್ರಮ ಕೈಗೊಂಡಿರುವರೇ.

ಮೇಲ್ಕಂಡ ಅಂಶಗಳಿಗೆ ಈ ಕೆಳಗಿನಂತೆ ಉತ್ತರಿಸುತ್ತೇನೆ.

**ಅಂಶ-1 ಸಕಾರಾತ್ಮಕ**

**ಅಂಶ-2 ಸಕಾರಾತ್ಮಕ**

**ಅಂಶ-3 ನಕಾರಾತ್ಮಕ**

ಕಾರಣಗಳನ್ನು ಈ ಕೆಳಗೆ ವಿವರಿಸಲಾಗಿದೆ.

**ಅಂಶ-1**

ದಿನಾಂಕ: 10.5.2000 ರಂದು ಸಾಯಂಕಾಲ 3.15 ಗಂಟೆ ಸಮಯದಲ್ಲಿ ಶ್ರೀ ಬಿ. ಪಿ. ಹೂಗಾರ್ ಪೋಲಿಸ್ ಇನ್‌ಸ್ಪೆಕ್ಟರ್ ರವರು ಡಿ.ಸಿ.ಐ.ಬಿ ಕಛೇರಿಯಲ್ಲಿರುವಾಗ ಭಾತ್ಮೆದಾರರಿಂದ ಶಿವಮೊಗ್ಗದಿಂದ-ಅಮರಾಪುರಕ್ಕೆ ಸಿಟಿಕ್ಯೂ-7625 ನೋಂದಣಿವುಳ್ಳ ಕಾರಿನಲ್ಲಿ ಶ್ರೀಗಂಧದ ತುಂಡುಗಳ ಕಳ್ಳಸಾಗಾಣಿಕೆ ನಡೆಯುತ್ತದೆ ಎಂಬ ಖಚಿತ ವರ್ತಮಾನ ದೊರತಾಗ ಇಲಾಖಾ ಜೀಪ್ ಸಂಖ್ಯೆ: ಕೆಎ-32 ಜಿ-10 ರಲ್ಲಿ ಪಂಚಾಯಿತ್ತಿದಾರರು ಹಾಗೂ ಸಿಬ್ಬಂದಿವರ್ಗದೊಂದಿಗೆ ಚಿತ್ರದುರ್ಗದಿಂದ ಹೊಳಲ್ಕೆರೆಗೆ ಹೋಗುವ ರಸ್ತೆಯಲ್ಲಿ ದೇವಪುರದಹಟ್ಟಿ ಹತ್ತಿರವಿರುವ ದುರ್ಗಾಗಾರ್ಡನ್ ಹೋಟಲ್ ಸಮೀಪ ರಸ್ತೆಯಲ್ಲಿ ಜೀಪನ್ನು ನಿಲ್ಲಿಸಿಕೊಂಡು ಕಾಯುತ್ತಿರುವಾಗ ಸಂಜೆ ಸುಮಾರು 4.00 ಗಂಟೆ ಸಮಯದಲ್ಲಿ ಭಾತ್ಮೆದಾರರಿಂದ ಬಂದ ವರ್ತಮಾನದಂತೆ ಹೊಳಲ್ಕೆರೆಯಿಂದ ಬಂದ ಸಿಟಿಕ್ಯೂ-7625 ಅಂಬಾಸಿಡರ್ ಕಾರನ್ನು ತಡೆದು ನಿಲ್ಲಿಸಿದಾಗ ಕಾರಿನ ಚಾಲಕ ಮತ್ತು ಇಬ್ಬರು ವ್ಯಕ್ತಿಗಳು ತಪ್ಪಿಸಿಕೊಂಡು ಓಡಿಹೋಗಿರುತ್ತಾರೆ. ಕಾರಿನಲ್ಲಿದ್ದ ಇನ್ನು ಇಬ್ಬರು ವ್ಯಕ್ತಿಗಳು ಓಡಲು ಪ್ರಯತ್ನಿಸಿದಾಗ ಪೋಲಿಸ್ ಸಿಬ್ಬಂದಿಯು ಆ ಇಬ್ಬರನ್ನು ಹಿಡಿದು ವಶಕ್ಕೆ ತೆಗೆದುಕೊಂಡಿರುತ್ತಾರೆ. ಸಿಕ್ಕಿಬಿದ್ದವರ ಹೆಸರು ವಿಚಾರಿಸಲಾಗಿ (1) ಶ್ರೀ ಮಹೇಶ್ ತಂದೆ ಮಲ್ಲಪ್ಪ, ಹರಗಿ ಗ್ರಾಮ, ಶಿವಮೊಗ್ಗ ಜಿಲ್ಲೆ (2) ಶ್ರೀ ಮಹೇಶ್ ತಂದೆ ರಾಮಣ್ಣ, ಕೋಳೂರು, ತೀರ್ಥಹಳ್ಳಿ ತಾಲ್ಲೂಕು, ಶಿವಮೊಗ್ಗ ಜಿಲ್ಲೆ ಎಂದು ತಿಳಿದುಬಂದಿರುತ್ತದೆ. ಓಡಿ ತಪ್ಪಿಸಿಕೊಂಡ ವ್ಯಕ್ತಿಗಳ ಹೆಸರು ವಿಳಾಸ ವಿಚಾರಿಸಲಾಗಿ (1) ಶ್ರೀ ಸುಧಾಕರ, ತೀರ್ಥಹಳ್ಳಿ ತಾ: ಶಿವಮೊಗ್ಗ ಜಿಲ್ಲೆ (2) ಶ್ರೀ ಬಸವರಾಜ ಆಟೋ ಚಾಲಕ, ವಿದ್ಯಾನಗರ, ಶಿವಮೊಗ್ಗ (3) ಶ್ರೀ ನಾಗರಾಜ, ಕಾರು ಚಾಲಕ, ವಿದ್ಯಾನಗರ, ಶಿವಮೊಗ್ಗ ಎಂದು ತಿಳಿದು ಬಂದಿರುತ್ತದೆ. ನಂತರ ಕಾರನ್ನು ತಪಾಸಣೆ ಮಾಡಿದಾಗ ಕಾರಿನಲ್ಲಿ 5 ಗೋಣಿ ಚೀಲಗಳಲ್ಲಿ ಶ್ರೀಗಂಧದ ತುಂಡುಗಳು ಕಂಡು ಬಂದಿರುತ್ತವೆ.

ನಂತರ ಪಂಚರ ಸಮಕ್ಷಮ ಸಿಟಿಕ್ಯೂ-7625 ಅಂಬಾಸಿಡರ್ ಕಾರು ಹಾಗೂ ಕಾರಿನ ಒಳಗಡೆ ಹಿಂಭಾಗದ ಸೀಟಿನ ಮುಂಭಾಗ ಮತ್ತು ಕೆಳಗಡೆ ಗಂಧದ ಮರದ ಸಣ್ಣ ತುಂಡುಗಳನ್ನು ಹೊರಕ್ಕೆ ತೆಗೆದು ಅವುಗಳ ಉದ್ದ, ಸುತ್ತಳತೆಗಳನ್ನು ಅಳತೆಮಾಡಿಸಿ A1 ರಿಂದ A45 ರವರೆಗೆ ನಂಬರ್ ನೀಡಲಾಗಿದೆ ಹಾಗೂ ಆ ಗೋಣಿ ಚೀಲದ ಮೇಲೆ 'A' ಎಂದು ಬರೆಯಲಾಗಿದೆ. ಕಾರಿನ ಡಿಕ್ಕಿಯಲ್ಲಿ ದೊರೆತ ಶ್ರೀಗಂಧದ ಮರದ ಬೇರುಗಳು ಹಾಗೂ ತುಂಡುಗಳನ್ನು ನಂಬರಿಂಗ್ ಮಾಡದೆ ನಾಲ್ಕು ಗೋಣಿ ಚೀಲಗಳಲ್ಲಿ ತುಂಬಿಸಿ ಚೀಲದ ಮೇಲೆ 'B','C','D' ಮತ್ತು 'E' ಎಂದು ಬರೆಯಲಾಗಿದೆ. 5 ಚೀಲಗಳಲ್ಲಿದ್ದ ಶ್ರೀಗಂಧದ ಒಟ್ಟು ತೂಕ ಸುಮಾರು 157 ಕೆ. ಜಿ. ಇರುತ್ತದೆ. ನಂತರ ಸಿಟಿಕ್ಯೂ-7625 ನೋಂದಣಿ ಸಂಖ್ಯೆಯ ಅಂಬಾಸಿಡರ್ ಕಾರನ್ನು ಮತ್ತು ಕಾರಿನಲ್ಲಿ ದೊರೆತ ಶ್ರೀಗಂಧದ ತುಂಡುಗಳನ್ನು ಅಮಾನತ್ತುಪಡಿಸಿಕೊಂಡು ಕಲಂ 86,87 ಮತ್ತು ಕರ್ನಾಟಕ ಅರಣ್ಯ ಕಾಯ್ದೆ-1963 ರನ್ವಯ ಪ್ರಕರಣವನ್ನು ಚಿತ್ರದುರ್ಗ ಗ್ರಾಮಾಂತರ ಠಾಣೆ ಗುನ್ನೆ ನಂ. 196/2000 ರಲ್ಲಿ ಕೇಸು ದಾಖಲಿಸಲಾಗಿದೆ. ಪ್ರಥಮ ವರ್ತಮಾನ ವರದಿಯೊಂದಿಗೆ ಆರೋಪಿತರನ್ನು ಮಾನ್ಯ ನ್ಯಾಯಾಲಯದ ಮುಂದೆ ಹಾಜರುಪಡಿಸಿರುತ್ತಾರೆ.

ಒಟ್ಟಿನಲ್ಲಿ ಅಂಬಾಸಿಡರ್ ಕಾರು ಸಂಖ್ಯೆ: ಸಿಟಿಕ್ಯೂ-7625ನ್ನು ಮತ್ತು ಅದರಲ್ಲಿ ಅಕ್ರಮವಾಗಿ ಶ್ರೀಗಂಧವನ್ನು ಸಾಗಿಸುತ್ತಿದ್ದಾಗ ಅಮಾನತ್ತುಪಡಿಸುವಾಗ ಹಾಗೂ ಮಹಜರ್ ಕ್ರಮ ಜರುಗಿಸುವಾಗ ಕರ್ನಾಟಕ ಅರಣ್ಯ ಕಾಯ್ದೆ - 1963ರ ಪ್ರಕಾರ ಕಲಂ-62ರ ನಿಯಮಗಳನ್ನು ಪಾಲಿಸಿರುತ್ತಾರೆ.

ಸದರಿ ಪ್ರಕರಣವು ಅರಣ್ಯ ಕಾಯ್ದೆಗಳ ಉಲ್ಲಂಘನೆಗೆ ಸಂಬಂಧಪಟ್ಟಿದ್ದರಿಂದ ಮುಂದಿನ ನಡವಳಿಕೆಗಳನ್ನು ನಡೆಸುವ ಬಗ್ಗೆ ಅಂಬಾಸಿಡರ್ ಕಾರು ಮತ್ತು ಅದರಲ್ಲಿದ್ದ ಶ್ರೀಗಂಧವನ್ನು ಈ ಪ್ರಾಧಿಕಾರಕ್ಕೆ ಒಪ್ಪಿಸಿರುತ್ತಾರೆ. ಅಮಾನತ್ತುಪಡಿಸಿಕೊಳ್ಳಲಾದ ಶ್ರೀಗಂಧವನ್ನು ವಲಯ ಅರಣ್ಯಾಧಿಕಾರಿ, ಚಿತ್ರದುರ್ಗ ವಲಯ, ಚಿತ್ರದುರ್ಗ ಇವರು ಪರಿಶೀಲಿಸಿ ಶ್ರೀಗಂಧವೆಂದು ದೃಢೀಕರಿಸಿರುತ್ತಾರೆ.

**ವಿಚಾರಣಾ ಸಮಯದಲ್ಲಿ ಪ್ರಾಸಿಕ್ಯೂಷನ್ ಸಾಕ್ಷಿ-1:-** ಶ್ರೀ ಮಂಜುನಾಥ್‌ನಾಯ್ಕ್ ರವರು ನುಡಿದ ಪ್ರಕಾರ 2 ವರ್ಷಗಳ ಹಿಂದೆ 4.00 ಗಂಟೆ ಸಮಯದಲ್ಲಿ ದೇವಪುರದಹಟ್ಟಿ ಮತ್ತು ಜಾನುಕೊಂಡ ಮಧ್ಯದ ಮಾರ್ಗ ದುರ್ಗಾಗಾರ್ಡನ್ ಡಾಬಾ ಹೋಟಲ್ ಹತ್ತಿರ ಸರ್ಕಲ್ ಇನ್‌ಸ್ಪೆಕ್ಟರ್ ಹೂಗಾರರವರು ಅಲ್ಲಿಗೆ ಬಂದು ತನಗೆ ಮಹಜರ್ ಸಾಕ್ಷಿಯಾಗಿರಲು ಕೇಳಿಕೊಂಡಾಗ್ಯೂ ತಾನು ಮತ್ತು ಮತ್ತೊಬ್ಬ ಸಾಕ್ಷಿ ಅಲ್ಲಿದ್ದು, ಒಪ್ಪಿಕೊಂಡಿದ್ದು, ಆ ಸ್ಥಳದಲ್ಲಿ ಹೊಳಲ್ಕೆರೆ ಕಡೆಯಿಂದ ಕಾರಿನಲ್ಲಿ ಅಕ್ರಮ ಗಂಧ ಸಾಗಾಣಿಕೆ ಮಾಡುತ್ತಿದ್ದಾರೆ. ಅದನ್ನು ನಾವು ಹಿಡಿಯಲು ಬಂದಿರುವುದಾಗಿ ತಿಳಿಸಿದ್ದು, ಅದೇ ರೀತಿ ಸ್ಥಳದಲ್ಲಿ ಪೊಲೀಸರು ರಸ್ತೆ ಕಾಯುತ್ತಿದ್ದಾಗ ಒಂದು ಬಿಳಿ ಕಾರು ಅಲ್ಲಿಗೆ ಬಂದಾಗ ಕಾರನ್ನು ತಡೆದು ನಿಲ್ಲಿಸಲು ಕಾರಿನಲ್ಲಿದ್ದ 5 ಜನರ ಪೈಕಿ 3 ಜನ ಕಾರಿನಿಂದ ಇಳಿದು ಓಡಿಹೋದರು ಇಬ್ಬರನ್ನು ಹಿಡಿದು ಕಾರಿನಲ್ಲಿದ್ದ ಶ್ರೀಗಂಧದ ತುಂಡುಗಳನ್ನು ಅಕ್ರಮ ಸಾಗಾಣಿಕೆ ಮಾಡುತ್ತಿದ್ದು ಕಂಡು ಬಂದು ಈ ಕಾರಣ ಸ್ಥಳದಲ್ಲಿ ಆಸಾಮಿಗಳನ್ನು ದಸ್ತಗಿರಿ ಮಾಡಿ, ಸ್ಥಳದಲ್ಲಿ ದೊರೆತ ಕಾರು ಮತ್ತು ಶ್ರೀಗಂಧದ ತುಂಡುಗಳನ್ನು ಮಹಜರ್ ಮೂಲಕ ಅಮಾನತ್ತುಪಡಿಸಿಕೊಂಡು ಆ ಮಹಜರ್‌ಗೆ ಸಹಿ ಮಾಡಿದ ಬಗ್ಗೆ ಸಾಕ್ಷಿ ಹೇಳಿರುತ್ತಾರೆ. ಅದೇ ರೀತಿ ಕಾರು ಮತ್ತು ಶ್ರೀಗಂಧವನ್ನು ಮುದ್ದೇಮಾಲು 1 ಮತ್ತು 2 ರಲ್ಲಿ ನೋಡಿ ಗುರುತಿಸಿರುತ್ತಾರೆ. ಅರ್ಜಿದಾರರ ಪರ ವಕೀಲರು ಸದರಿ ಸಾಕ್ಷಿದಾರರಿಗೆ ಪಾರ್ಟಿ ಸವಾಲು ಮಾಡಿದಾಗ, ಮೇಲೆ ಹೇಳಿದ ಅಂಶಗಳನ್ನು ಅವರು ಪಾರ್ಟಿ ಸವಾಲಿನಲ್ಲಿ ಸಾಕ್ಷಿದಾರರು ಅಲ್ಲಗೆಳೆದಿರುವುದಿಲ್ಲ.

**ಪ್ರಾಸಿಕ್ಯೂಷನ್ ಸಾಕ್ಷಿ -2 :-** ಶ್ರೀ ಬಿ. ಪಿ. ಹೂಗಾರ್, ಪೋಲಿಸ್ ಅಧಿಕಾರಿಗಳಾಗಿದ್ದು, ಸದರಿಯವರು ದಿನಾಂಕ: 10.5.2000 ರಂದು ಕಾರಿನಲ್ಲಿ ಅಕ್ರಮ ಶ್ರೀಗಂಧ ಸಾಗಾಣಿಕೆ ಮಾಡುತ್ತಿದ್ದಾರೆ ಎಂಬ ಮಾಹಿತಿ ಬಂದಕೂಡಲೇ ತಾನು ಮತ್ತು ತನ್ನ ಸಿಬ್ಬಂದಿ ಸೇರಿ ತಮ್ಮ ಇಲಾಖಾ ವಾಹನದಲ್ಲಿ ದೇವಪುರದಹಟ್ಟಿ ಮತ್ತು ಜಾನುಕೊಂಡ ಮಧ್ಯ ಇರತಕ್ಕಂತ ದುರ್ಗಾಗಾರ್ಡನ್ ಡಾಬಾ ಹೋಟಲ್ ಹತ್ತಿರ ಪಂಚರನ್ನು ಬರಮಾಡಿಕೊಂಡು

ರಸ್ತೆ ಕಾಯುತ್ತಿದ್ದಗ್ಯೂ ಹೊಳಲ್ಕೆರೆ ರಸ್ತೆ ಕಡೆಯಿಂದ ಒಂದು ಕಾರು ಬಂದಿದ್ದು, ಅದನ್ನು ಕೈಸನ್ನೆ ಮಾಡಿ ನಿಲ್ಲಿಸಿ ನೋಡಲಾಗಿ, ಕಾರಿನಲ್ಲಿ 5 ಜನ ಇದ್ದು, ಅವರಲ್ಲಿ 3 ಜನ ಓಡಿ ಹೋಗಿದ್ದು, 2 ಜನ ಸಿಕ್ಕಿದ್ದು ಅವರ ಮೊಕ್ತ ಕಾರನ್ನು ಶೋಧನೆ ಮಾಡಿ ನೋಡಲಾಗಿ ಕಾರಿನಲ್ಲಿ ಶ್ರೀಗಂಧ ದೊರೆತಿದ್ದು, ಅದನ್ನು ಸಾಗಾಣಿಕೆ ಮಾಡಲು ಪರವಾನಿಗೆ ಇದೆಯೇ ಅಥವಾ ಇಲ್ಲವೇ ಎಂದು ಕೇಳಲಾಗಿ ಅವರು ಇಲ್ಲವೆಂದು ಹೇಳಲಾದ್ದರಿಂದ, ಸ್ಥಳದಲ್ಲಿ ಪಂಚರ ಮೊಕ್ತ ಮಹಜರ್ ಮೂಲಕ ಕಾರನ್ನು ಕಾರಿನಲ್ಲಿದ್ದ ಶ್ರೀಗಂಧವನ್ನು ಅಮಾನತ್ತುಪಡಿಸಿಕೊಂಡು ಆಸಾಮಿಗಳನ್ನು ದಸ್ತಗಿರಿ ಮಾಡಿ ಸಂಬಂಧಪಟ್ಟ ತನಿಖಾಧಿಕಾರಿಗಳಿಗೆ ಮುಂದಿನ ಕ್ರಮಕ್ಕಾಗಿ ಕಾಗದ ಪತ್ರಗಳನ್ನು ಆಸಾಮಿಗಳು ಶ್ರೀಗಂಧ ಮತ್ತು ಕಾರನ್ನು ಒಪ್ಪಿಸಿದ್ದಾಗಿ ಸಾಕ್ಷಿ ನುಡಿದಿರುತ್ತಾರೆ ಹಾಗೂ ಮಹಜರ್ ನಿಶಾನೆ ಪಿ-1 ಹಾಗೂ ಮುದ್ದೇಮಾಲುಗಳನ್ನು ನೋಡಿ ಗುರುತಿಸಿದ್ದಾಗಿ ಸಾಕ್ಷಿ ನುಡಿದಿರುತ್ತಾರೆ. ಈ ಕೇಸಿನಲ್ಲಿ ಸದರಿ ಸಾಕ್ಷಿದಾರರನ್ನು ಅರ್ಜಿದಾರರ ಪರ ವಕೀಲರು ಪಾರ್ಟಿ ಸವಾಲು ಮಾಡಿದಾಗ ಅವರು ಮೇಲೆ ಹೇಳಿದ ಅಂಶಗಳನ್ನು ಅಲ್ಲಗೆಳೆದಿರುವುದಿಲ್ಲ.

**ಪ್ರಾಸಿಕ್ಯೂಷನ್ ಸಾಕ್ಷಿ - 3:-** ಶ್ರೀ ಚಂದ್ರಹಾಸ್ ಲಕ್ಷ್ಮಣನಾಯ್ಕ್, ಪಿ.ಎಸ್.ಐ ಆಗಿದ್ದು, ಸದರಿಯವರು ಈ ಕೇಸಿನಲ್ಲಿ ಕಾಗದ ಪತ್ರಗಳನ್ನು ಪಡೆದುಕೊಂಡು ಭರಮಸಾಗರ ಮುಖ್ಯ ಪೇದೆ ಶ್ರೀ ಹೆಚ್. ಆಂಜನೇಯ ರವರು ಕೊಟ್ಟ ವರದಿ ಹಾಗೂ 2 ಆಸಾಮಿಗಳನ್ನು ಮತ್ತು ಅಂಬಾಸಿಡರ್ ಕಾರನ್ನು ತಡೆದು ಪರಿಶೀಲಿಸಿ ಅದರಲ್ಲಿದ್ದ ಸುಮಾರು 157 ಕೆ. ಜಿ. ತೂಕದ ಶ್ರೀಗಂಧವನ್ನು 5 ಗೋಣಿಚೀಲಗಳಲ್ಲಿ ತುಂಬಿಸಿದ್ದನ್ನು ತಮ್ಮ ಠಾಣೆ ಗುನ್ನೆ ನಂಬರ್ 196/2000 ರಲ್ಲಿ ಪ್ರಕರಣ ದಾಖಲು ಮಾಡಿಕೊಂಡು ಪ್ರಥಮ ವರ್ತಮಾನ ವರದಿಯನ್ನು ಮಾನ್ಯ ನ್ಯಾಯಾಲಯಕ್ಕೆ ಮತ್ತು ಮೇಲಾಧಿಕಾರಿಗಳಿಗೆ ಸಲ್ಲಿಸಿದ್ದಾರೆ. ಆರೋಪಿತರನ್ನು ದಸ್ತಗಿರಿ ಮಾಡಿ, ಮಾನ್ಯ ನ್ಯಾಯಾಲಯಕ್ಕೆ ರಿಮ್ಯಾಂಡ್ ಅರ್ಜಿಯೊಂದಿಗೆ ಒಪ್ಪಿಸಿದ್ದು ಹಾಗೂ ಈ ಪ್ರಕರಣದಲ್ಲಿ ಅಮಾನತ್ತುಪಡಿಸಿಕೊಂಡ ಮಾಲನ್ನು, ಮಾಲು ಪಟ್ಟಿ ಮಾಡಿ, ಅಮಾನತ್ತುಪಡಿಸಿಕೊಂಡ ಕಾರು ಹಾಗೂ ಶ್ರೀಗಂಧವನ್ನು ಮುಂದಿನ ವಿಲೇ ಹಾಗೂ ಕ್ರಮಕ್ಕಾಗಿ ಈ ಪ್ರಾಧಿಕಾರದ ಮುಂದೆ ಒಪ್ಪಿಸಿದ್ದಾರೆ. ಅಮಾನತ್ತುಪಡಿಸಿಕೊಂಡ ಶ್ರೀಗಂಧವನ್ನು ಪರೀಕ್ಷೆ ಸಲುವಾಗಿ, ಚಿತ್ರದುರ್ಗ ವಲಯ ಅರಣ್ಯಾಧಿಕಾರಿಗಳಿಗೆ ವರದಿ ಮಾಡಿಕೊಂಡಿದ್ದು, ಅವರಿಂದ ದೃಢೀಕರಣ ಪತ್ರ ಕೂಡ ಪಡೆದಿರುತ್ತಾರೆ ಮತ್ತು ತನಿಖೆ ಪೂರ್ಣಗೊಳಿಸಿ ಆರೋಪಿತರ ವಿರುದ್ಧ ಆಪಾದನೆ ಪಟ್ಟಿ ಸಲ್ಲಿಸಿರುತ್ತಾರೆ ಮತ್ತು ಈ ಕೇಸಿನಲ್ಲಿ ಅಮಾನತ್ತುಪಡಿಸಿಕೊಂಡ ಮುದ್ದೇಮಾಲುಗಳನ್ನು ನೋಡಿ ಗುರುತಿಸಿರುತ್ತಾರೆ ಮತ್ತು ದಾಖಲೆಗಳನ್ನು ಗುರುತಿಸಿರುತ್ತಾರೆ. ಹಾಗೆ ಪಾರ್ಟಿ ಸವಾಲಿನಲ್ಲಿ ಮೇಲೆ ಹೇಳಿರುವ ಅಂಶಗಳನ್ನು ಅಲ್ಲಗೆಳೆದಿರುವುದಿಲ್ಲ.

**ಪ್ರಾಸಿಕ್ಯೂಷನ್ ಸಾಕ್ಷಿ - 4:-** ಶ್ರೀ ಹೆಚ್. ಆಂಜನೇಯ ರವರು ಸಾಕ್ಷಿ ನುಡಿದ ಪ್ರಕಾರ ಭರಮಸಾಗರ ಪೋಲಿಸ್ ಠಾಣೆಯಲ್ಲಿ ಮುಖ್ಯ ಪೇದೆಯಾಗಿದ್ದಾಗ ಈ ಕೇಸಿನ ಬಿ. ಪಿ. ಹೂಗಾರ್ ವೃತ್ತ, ನಿರೀಕ್ಷಕರು ಹಾಗೂ ಅವರ ಸಿಬ್ಬಂದಿಯವರು ಸಾಕ್ಷಿದಾರರನ್ನು ಕರೆಸಿ ಅಕ್ರಮ ಶ್ರೀಗಂಧ ಸಾಗಾಣಿಕೆ ನಡೆಯುತ್ತಿದ್ದ ಬಗ್ಗೆ ವಿಚಾರ ತಿಳಿಸಿ ಅವರನ್ನು ಪಂಚರಾಗಿ ಕರೆದುಕೊಂಡು ಹೊಳಲ್ಕೆರೆ ರಸ್ತೆಯಲ್ಲಿರುವ ದುರ್ಗಾಗಾರ್ಡನ್ ಡಾಬಾ ಹೋಟಲ್ ಹತ್ತಿರ ಗಸ್ತು ಕಾಯುತ್ತಿದ್ದಾಗ ಹೊಳಲ್ಕೆರೆ ಕಡೆಯಿಂದ ಒಂದು ಕಾರು ಬಂದಿದ್ದನ್ನು ತಡೆದು ನಿಲ್ಲಿಸಿದಾಗ ವಾಹನದಲ್ಲಿದ್ದ 5 ಜನರ ಪೈಕಿ 3 ಜನರು ಓಡಿಹೋದರು, 2 ಜನ ಸಿಕ್ಕಿಬಿದ್ದರು ಕಾರಿನಲ್ಲಿದ್ದ ಶ್ರೀಗಂಧದ ಬಗ್ಗೆ ಉತ್ತರ ಕೊಡದೇ ಇದ್ದುದರಿಂದ ಅಕ್ರಮವಾಗಿ ಕಾರಿನಲ್ಲಿ ಶ್ರೀಗಂಧ ಸಾಗಾಣಿಕೆ ಮಾಡುತ್ತಿದ್ದನ್ನು ಮನವರಿಕೆ ಮಾಡಿಕೊಂಡು ಓಡಿಹೋದ ವ್ಯಕ್ತಿಗಳ ಹೆಸರು ವಿಳಾಸ ಪಡೆದುಕೊಂಡು ಕಾರನ್ನು ಶೋಧನೆ ಮಾಡಲಾಗಿ 5 ಗೋಣಿ ಚೀಲದಲ್ಲಿ ಶ್ರೀಗಂಧ ಇದ್ದುದು ಅದನ್ನು ತೂಕ ಮಾಡಲಾಗಿ ಒಟ್ಟು ಸುಮಾರು 157 ಕೆ. ಜಿ. ಶ್ರೀಗಂಧ ಇದ್ದುದಾಗಿ ಅಂದಾಜುಮಾಡಿ ಆಸಾಮಿಗಳನ್ನು ದಸ್ತಗಿರಿ ಮಾಡಿ, ಕಾರು ಮತ್ತು ಶ್ರೀಗಂಧವನ್ನು ಮಹಜರ್ ಮೂಲಕ ಅಮಾನತ್ತುಪಡಿಸಿಕೊಂಡಿದ್ದು ಹಾಗೂ ಮಹಜರ್‌ಗೆ ರುಜು ಮಾಡಿದ್ದಾಗಿ ಸಾಕ್ಷಿ ಹೇಳಿರುತ್ತಾರೆ. ಮುದ್ದೇಮಾಲುಗಳನ್ನು ಗುರುತಿಸಿ ಸಾಕ್ಷಿ ನುಡಿದಿರುತ್ತಾರೆ. ಸದರಿ ಸಾಕ್ಷಿದಾರರು ಪಾಟಿ ಸವಾಲಿನಲ್ಲಿ ಮೇಲೆ ಹೇಳಿದ ಅಂಶಗಳನ್ನು ಅಲ್ಲಗೆಳೆದಿರುವುದಿಲ್ಲ.

**ಪ್ರಾಸಿಕ್ಯೂಷನ್ ಸಾಕ್ಷಿ - 5:-** ಶ್ರೀ ಉಮೇಶ್ ನಾಯ್ಕ್ ಇದ್ದು, ಸದರಿಯವರು ಮಹಜರ್ ನಿಶಾನೆ ಪಿ-1 ಸಾಕ್ಷಿದಾರರಾಗಿದ್ದು, ಅದರಂತೆ ಸಾಕ್ಷಿ ನುಡಿದು ಪ್ರತಿಕೂಲ ಸಾಕ್ಷಿಯಾಗಿರುತ್ತದೆ.

**ಪ್ರಾಸಿಕ್ಯೂಷನ್ ಸಂಖ್ಯೆ-6:-** ಶ್ರೀ ಎಲ್. ಚನ್ನೇಗೌಡ, ವಲಯ ಅರಣ್ಯಾಧಿಕಾರಿ, ಈ ಕೇಸಿನಲ್ಲಿ ಅಮಾನತ್ತುಪಡಿಸಿಕೊಂಡ ಶ್ರೀಗಂಧದ ತುಂಡುಗಳನ್ನು ಪರಿಶೀಲನೆ ಮಾಡಿ ಅವುಗಳು ಶ್ರೀಗಂಧದ ತುಂಡುಗಳೆಂದು ದೃಢೀಕರಣ ಪತ್ರ ಕೊಟ್ಟ ಬಗ್ಗೆ ಸಾಕ್ಷಿ ನುಡಿದಿರುತ್ತಾರೆ. ಸದರಿ ದೃಢೀಕರಣ ಪತ್ರ ನಿಶಾನೆ ಪಿ-3 ರಲ್ಲಿ ಗುರುತಿಸಿರುತ್ತಾರೆ ಹಾಗೂ ಮುದ್ದೇಮಾಲು 2ನ್ನು ನೋಡಿ ಗುರುತಿಸಿರುತ್ತಾರೆ. ಅವರು ಸಹ ಪಾರ್ಟಿ ಸವಾಲಿನಲ್ಲಿ ಮೇಲೆ ಹೇಳಿದ ಅಂಶಗಳನ್ನು ಅಲ್ಲಗೆಳೆದಿರುವುದಿಲ್ಲ.

ಮೇಲ್ಕಂಡ ಪ್ರಾಸಿಕ್ಯೂಷನ್ ಸಾಕ್ಷಿ 1 ರಿಂದ 4 ಹಾಗೂ 6 ಇವರುಗಳ ಹೇಳಿಕೆಯನ್ನು ಪರಿಶೀಲಿಸಿದಾಗ, ಈ ಪ್ರಕರಣದಲ್ಲಿ ಅಂಬಾಸಿಡರ್ ಕಾರು ನೋಂದಣಿ ಸಂಖ್ಯೆ: ಸಿಟಿಕ್ಯೂ-7625ನ್ನು ಶ್ರೀಗಂಧದ ಸಮೇತ ವಶಪಡಿಸಿಕೊಂಡಿರುವುದು ಖಚಿತವಾಗಿದೆ ಹಾಗೂ ಕರ್ನಾಟಕ ಅರಣ್ಯ ಕಾಯ್ದೆ-1963ರ ಕಲಂ-62ರ ಪ್ರಕಾರ ಕ್ರಮ ಬದ್ಧವಾಗಿ ಅಮಾನತ್ತುಪಡಿಸಲಾಗಿದೆ ಎಂಬುದು ದೃಢಪಟ್ಟಿರುತ್ತದೆ.

**ಅಂಶ-2**

**ಕಲಂ 80, 84 ಕರ್ನಾಟಕ ಅರಣ್ಯ ಕಾಯ್ದೆ - 1963**ರ ಪ್ರಕಾರ ಶ್ರೀಗಂಧವು ಎಲ್ಲಿ ಬೆಳೆದರೂ ರಾಜ್ಯ ಸರ್ಕಾರದ ಸ್ವತ್ತಾಗಿರುತ್ತದೆ. **ಸೆಕ್ಷನ್-50 ಕರ್ನಾಟಕ ಅರಣ್ಯ ಕಾಯ್ದೆ-1963 ಕರ್ನಾಟಕ ಅರಣ್ಯ ನಿಯಮಗಳು-1969 ನಿಯಮ-154** ಮತ್ತು **155**ಗಳನ್ನು ಪರಿಸಿದೆ. ಶ್ರೀಗಂಧದ ಕಳ್ಳ ಸಾಗಾಣಿಕೆಯ ಪ್ರಕರಣ ದಾಖಲಾದ ಬಳಿಕ ಅಂತಹ ಪ್ರಕರಣದಲ್ಲಿ ಅಮಾನತ್ತುಪಡಿಸಿರುವ ಶ್ರೀಗಂಧವನ್ನು ರಾಜ್ಯ ಸರ್ಕಾರದ ಸ್ವತ್ತು ಎಂದೇ ಪರಿಗಣಿಸಲಾಗುತ್ತದೆ. ವಲಯ ಅರಣ್ಯಾಧಿಕಾರಿಗಳು ಇವರು ಅಮಾನತ್ತುಪಡಿಸಿಕೊಂಡ ಮಾಲನ್ನು ಪರಿಶೀಲಿಸಿ ಪ್ರಕರಣದಲ್ಲಿ ವಶಪಡಿಸಿಕೊಂಡಿರುವ ಮಾಲು ಶ್ರೀಗಂಧವೇ ಎಂದು ದೃಢೀಕರಿಸಿ ಪ್ರಮಾಣ ಪತ್ರ ಸಲ್ಲಿಸಿರುತ್ತಾರೆ. ಆದುದರಿಂದ ಅಮಾನತ್ತುಪಡಿಸಿಕೊಂಡ ಅಂಬಾಸಿಡರ್ ಕಾರು ನೋಂದಣಿ ಸಂಖ್ಯೆ: **ಸಿಟಿಕ್ಯೂ-7625** ರಲ್ಲಿ ಇದ್ದ ಮಾಲು ಶ್ರೀಗಂಧವೇ ಆಗಿರುತ್ತದೆ ಎಂಬುದು ದೃಢಪಟ್ಟಿರುತ್ತದೆ.

**ಅಂಶ-3**

ಈ ಪ್ರಕರಣದಲ್ಲಿ ಅಂಬಾಸಿಡರ್ ಕಾರು ನೋಂದಣಿ ಸಂಖ್ಯೆ: **ಸಿಟಿಕ್ಯೂ-7625**ರ ಮಾಲೀಕರಾದ ಶ್ರೀ ಎನ್. ಎಸ್. ಮೋಹನ್ ತಂದೆ ಶಿವಮೂರ್ತಿ ಸ್ವಾಮಿ, ಮಾತೃಛಾಯ, 2ನೇ ತಿರುವು, ವಿವೇಕಾನಂದ ನಗರ, ಸವಳಂಗಿ ರಸ್ತೆ, ಶಿವಮೊಗ್ಗ ಇವರು ವಿಚಾರಣಾ ಸಮಯದಲ್ಲಿ ವಾಹನದ ಮಾಲೀಕರು ವಾಹನವನ್ನು ಶ್ರೀಗಂಧ ಕಳ್ಳಸಾಗಾಣಿಕೆಯಲ್ಲಿ ದುರ್ಬಳಕೆ ಮಾಡುವ ಮುನ್ನ ಯಾವುದೇ ರೀತಿಯ ಮುಂಜಾಗರೂಕತೆ ಕ್ರಮಗಳನ್ನು ತೆಗೆದುಕೊಂಡಿರುವುದು ಕಂಡು ಬಂದಿರುವುದಿಲ್ಲ, ಭಾರತೀಯ **ದಂಡ ಸಂಹಿತೆ ಸೆಕ್ಷನ್ - 101** ಮತ್ತು **106** ರನ್ವಯ ಮತ್ತು **ಕರ್ನಾಟಕ ಅರಣ್ಯ ಕಾಯ್ದೆ - 1963 ರ ಸೆಕ್ಷನ್-71 (ಬಿ) (2)** ರನ್ವಯ ವಾಹನದ ಮಾಲೀಕರಿಗೆ ಅಥವಾ ಅವರ ಏಜೆಂಟರಿಗೆ ವಾಹನವು ಶ್ರೀಗಂಧದ ಕಳ್ಳಸಾಗಾಣಿಕೆಯಲ್ಲಿ ಭಾಗಿಯಾಗಿಲ್ಲ ಎಂಬುದನ್ನು ಸಾಬೀತುಪಡಿಸುವ ಜವಾಬ್ದಾರಿಯು ಇರುತ್ತದೆ. ಆದರೆ ವಾಹನದ ಮಾಲೀಕರು ವಾಹನವು ಯಾವುದೇ ಕಳ್ಳಸಾಗಾಣಿಕೆಯಲ್ಲಿ ಭಾಗಿಯಾಗಿಲ್ಲ ಎಂದು ದೃಢಪಡಿಸಲು ಮುನ್ನೆಚ್ಚರಿಕೆ ತೆಗೆದುಕೊಂಡ ಬಗ್ಗೆ ಈ ಪ್ರಾಧಿಕಾರದ ಮುಂದೆ ಯಾವುದೇ ಸಾಕ್ಷ್ಯಾದಾರಗಳನ್ನು ಹಾಜರುಪಡಿಸದ

ಕಾರಣ ಅರ್ಜಿದಾರ ಹಾಗೂ ವಾಹನದ ಮಾಲೀಕರು ಆರೋಪಿತರೊಂದಿಗೆ ಶಾಮೀಲಾಗಿ ತನ್ನ ವಾಹನವನ್ನು ಅಕ್ರಮವಾಗಿ ಶ್ರೀಗಂಧವನ್ನು ಸಾಗಾಣಿಕೆ ಮಾಡಲು ಅವಕಾಶ ನೀಡಿದ್ದಾರೆ ಎಂಬುದಾಗಿ ಮೇಲೆ ಹೇಳಿದ ಸಾಕ್ಷ್ಯಾದಾರಗಳ ಮೂಲಕ ದೃಢಪಟ್ಟಿರುತ್ತದೆ.

ಆದ್ದರಿಂದ ಅಂಶ-3 ನಕಾರಾತ್ಮಕ ಎಂದು ಸಮರ್ಥಿಸಿದೆ.

ಸರ್ಕಾರದ ಸಹಾಯಕ ಅಭಿಯೋಜಕ ನಿರ್ದೇಶಕರ ಮತ್ತು ಅರ್ಜಿದಾರರ ಪರ ವಕೀಲರ ವಾದ-ವಿವಾದಗಳನ್ನು ಆಲಿಸಿದ ನಂತರ ಈ ಕೆಳಗಿನಂತೆ ಆದೇಶ ನೀಡಿದೆ.

**ಆದೇಶ**

ಮೇಲ್ಕಂಡ ಎಲ್ಲಾ ಅಂಶಗಳನ್ನು ಪರಿಶೀಲಿಸಿ ಜಿ. ಎಸ್. ಕರಿಯಪ್ಪ, ಭಾಅಸೇ, ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಚಿತ್ರದುರ್ಗ ವಿಭಾಗ, ಚಿತ್ರದುರ್ಗ ಆದ ನಾನು **ಕರ್ನಾಟಕ ಅರಣ್ಯ ಕಾಯ್ದೆ-1963ರ ಸೆಕ್ಷನ್ -71(ಎ)** ಪ್ರಕಾರ ಪ್ರಸ್ತುತ ಪ್ರಕರಣದಲ್ಲಿ ಅಮಾನತ್ತುಪಡಿಸಿಕೊಂಡಿರುವ ವಾಹನ ಅಂಬಾಸಿಡರ್ ಕಾರು ನೋಂದಣಿ ಸಂಖ್ಯೆ: **ಸಿಟಿಕ್ಯೂ-7625** ಇಂಜಿನ್ ಸಂಖ್ಯೆ: **6 ED-046526**, ಛಾಸ್ಸಿ ಸಂಖ್ಯೆ: **111-586149** ಮತ್ತು ಅದರಲ್ಲಿ ಅಕ್ರಮವಾಗಿ ಸಾಗಿಸುತ್ತಿದ್ದ ಸುಮಾರು **157** ಕೆಜಿ ಶ್ರೀಗಂಧವನ್ನು ಸರ್ಕಾರದ ಪರವಾಗಿ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ. ಸದರಿ ವಾಹನ ಮತ್ತು ಶ್ರೀಗಂಧವು ಎಲ್ಲಾ ಋಣಭಾರಗಳಿಂದ ಮುಕ್ತವಾಗಿದೆ ಎಂದು ಘೋಷಿಸಿರುತ್ತೇನೆ.

ಈ ಆದೇಶವನ್ನು ದಿನಾಂಕ: 30.12.2004 ರಂದು ತೆರೆದ ನ್ಯಾಯಾಲಯದಲ್ಲಿ ನೀಡಲಾಗಿದೆ. ಈ ಆದೇಶವನ್ನು ಹೊರಡಿಸಿದ 30 ದಿನಗಳ ಒಳಗಾಗಿ ಯಾವುದೇ ಅಹವಾಲು ಸ್ವೀಕೃತವಾಗದಿದ್ದಲ್ಲಿ ಈ ಆದೇಶವೆ ಅಂತಿಮ ಆದೇಶವಾಗಿರುತ್ತದೆ.

ಪಿ.ಆರ್.108 ಅಧಿಕೃತ ಅಧಿಕಾರಿ ಹಾಗೂ, ಉಪ ಅರಣ್ಯ ಸಂರಕ್ಷಣಾಧಿಕಾರಿ, ಚಿತ್ರದುರ್ಗ ವಿಭಾಗ, ಚಿತ್ರದುರ್ಗ.

## DEPARTMENT OF PERSONNEL AND ADMINISTRATIVE REFORMS

**NOTIFICATION-I No. DPAR 15 HHL 2004 Bangalore, dated: 1st December 2004**

The following list of General Holidays sanctioned by the Government for the year 2005 is published for general information. All Second Saturdays, Sundays and.

| Sl.No. | Date | Days | Public Holidays |
|---|---|---|---|
| 1. | 14.01.2005 | Friday | Uttarayana Punyakal, Makara Sankranthi |
| 2. | 21.01.2005 | Friday | Bakrid |
| 3. | 26.01.2005 | Wednesday | Republic day |
| 4. | 08.03.2005 | Tuesday | Maha Shivaratri |
| 5. | 25.03.2005 | Friday | Good Friday |
| 6. | 14.04.2005 | Thursday | Dr. Ambedkar Jayanthi |
| 7. | 22.04.2005 | Friday | Mahaveer Jayanthi/Id-Milad |
| 8. | 11.05.2005 | Wednesday | Basaveshwara Jayanthi |
| 9. | 15.08.2005 | Monday | Independence day |
| 10. | 07.09.2005 | Wednesday | Varasiddi Vinayaka Vratha |
| 11. | 03.10.2005 | Monday | Mahalaya Amavasya |
| 12. | 12.10.2005 | Wednesday | Mahanavami, Ayudha Puja |
| 13. | 13.10.2005 | Thursday | Vijaya Dashami |
| 14. | 31.10.2005 | Monday | Naraka Chathurdashi |
| 15. | 01.11.2005 | Tuesday | Kannada Rajyothsava |
| 16. | 02.11.2005 | Wednesday | Bali Padyami, Deepavali |
| 17. | 04.11.2005 | Friday | Khutab-e-Ramzan |

**Note :**

1) This list does not include Last day of Moharam (20.02.2005) May day (01.05.2005) Mahatma Gandhi Jayanthi (02.10.2005) Christmas (25.12.2005) which falls on Sundays and Chandramana Ugadi (09.04.2005) which falls on Second Saturday.
2) Government offices will be closed through out the State on General Holidays. However Heads of Department should make necessary Arrangements for the discharge of urgent work.
3) If any of the Muslim Holidays notified above does not fall on the date notified Muslims in Government Service may be granted Holiday on the Date of observance in lieu of the holidays already notified.
4) Local holidays, only for Kodagu District are declared for Tula Sankramana 17.10.2005 (Monday) and Huthri Festival on 18.11.2005 (Friday).
5) Separate list of Holidays will be published by the Commissioner of Public Instructions Bangalore for the Education Department.
6) In addition to the General holidays the State Government Employees may utilise any of the Restricted Holidays not exceeding two days during the year 2005 with previous permission from the authority who is authorise to sanction casual leave.

By Order and in the name of the Governor of Karnataka,

**S. ZIYAULLAH**

Under Secretary to Government,

Dept. of Personnel & Administrative Reforms (State Protocol).

## ANNEXURE TO NOTIFICATION-I

List of Restricted Holidays for the State Government Employees for the year 2005.

| Sl.No. | Date | Days | Restricted Holidays |
|---|---|---|---|
| 1. | 01.01.2005 | Saturday | New Year's Day |
| 2. | 17.02.2005 | Thursday | Madhwa Navami |
| 3. | 26.03.2005 | Saturday | Holi Saturday |
| 4. | 18.04.2005 | Monday | Ramanavami |
| 5. | 12.05.2005 | Thursday | Ramanujacharya Jayanthi |
| 6. | 13.05.2005 | Friday | Shankaracharya Jayanthi |
| 7. | 23.05.2005 | Monday | Buddha Poornima |
| 8. | 19.08.2005 | Friday | Varamahalakshmi Vratha/Rug Upakarma/ Yajur Upakarma |
| 9. | 26.08.2005 | Friday | Krishna Janmashtami |
| 10. | 06.09.2005 | Tuesday | Swarna Gowri Vratha |
| 11. | 15.09.2005 | Thursday | Tiru Onam |
| 12. | 16.09.2005 | Friday | Anantha Padmanabha Vratha |
| 13. | 19.09.2005 | Monday | Shab-e Barath |
| 14. | 17.10.2005 | Monday | Tula Sankramana |
| 15. | 28.10.2005 | Friday | Jumat-Ul-Vida |
| 16. | 15.11.2005 | Tuesday | Gurunanak Jayanthi |
| 17. | 18.11.2005 | Friday | Huthri Festival/Bhakta Kanakadasa Jayanthi |
| 18. | 24.12.2005 | Saturday | Christmas Eve |

This list does not includes Holi Festival (25.03.2005) Souramana Ugadi (14.04.2005) and Shab-e-Quadar (31.10.2005) which falls on General Holidays.

**S. ZIYAULLAH**
Under Secretary to Government,
Dept of Personnel & Administrative Reforms (State Protocol).

## NOTIFICATION-II

Under the explanation of Section 25 of the Negotiable Instruments Act 1881 (Act No. XXVI of 1881) read with Notification No. 20/25/26/ Pub-1 dated 15.6.1957 of the Government of India Ministry of Home Affairs the following shall be Public Holidays throughout the State of Karnataka during the year 2005.

| Sl.No. | Date | Days | Public Holidays |
|---|---|---|---|
| 1. | 14.01.2005 | Friday | Uttarayana Punyakala, Sankranthi |
| 2. | 21.01.2005 | Friday | Bakrid |
| 3. | 26.01.2005 | Wednesday | Republic day |
| 4. | 08.03.2005 | Tuesday | Maha Shivaratri |
| 5. | 25.03.2005 | Friday | Good Friday |
| 6. | 01.04.2005 | Friday | Yearly Closing of Bank Accounts |
| 7. | 09.04.2005 | Saturday | Chandramana Ugadi |
| 8. | 14.04.2005 | Thursday | Dr. Ambedkar Jayanthi |
| 9. | 11.05.2005 | Wednesday | Basaveshwar Jayanthi |
| 10. | 15.08.2005 | Monday | Independence day |
| 11. | 07.09.2005 | Wednesday | Varasiddhi Vinayaka Vratha |
| 12. | 30.09.2005 | Friday | Half Yearly Closing of Bank Accounts |
| 13. | 12.10.2005 | Wednesday | Mahanavami, Ayudha Puja |
| 14. | 13.10.2005 | Thursday | Vijayadashami |
| 15. | 01.11.2005 | Tuesday | Kannada Rajyothsava |
| 16. | 02.11.2005 | Wednesday | Balipadyami, Deepavali |
| 17. | 04.11.2005 | Friday | Khutub-e-Ramzan |

1) This list does not includes Mahatma Gandhi Jayanthi (02.10.04) which falls on Sunday.

2) Local Holidays only for Kodagu District are declared for Tula Sankramana 17.10.2005 (Monday) and Huthri festival on 18.11.2005 (Friday).

3) These holidays are declared for closing of Accounts of Commercial Banks and Co-operative Banks. The Reserve Bank of India will be functioning on these days. There is however no change in the day of closing of Accounts of Reserve Bank of India which continues to be 30th June and 31st December (However if these days are Sundays or General Holidays. The last working day of the month will be the day for Closing of/ Accounts).

By Order and in the name of the Governor of Karnataka,

PR-129

**S. ZIYAULLAH**
Under Secretary to Government,
Dept. of Personnel & Administrative Reforms (State Protocol).